CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೧೦, ೨೦೦೫ (ಮಾಘ ೨೧, ಶಕ ವರ್ಷ ೧೯೨೬) | ಸಂಚಿಕೆ ೬

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಶ್ರೀಮತಿ ಕಮಲಮ್ಮ ಸಮೂಹ ಎ (ಕಿರಿಯ ಶ್ರೇಣಿ) ಅಧಿಕಾರಿ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರು ಇವರ ಮೇಲೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:**

1. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ.ಸಿಬ್ಬಂದಿ/(3)/ಸಿಆರ್/17/2003-2004 ದಿ:19/09/2003 ಮತ್ತು 08/01/2004.
2. ಶ್ರೀಮತಿ ಕಮಲಮ್ಮ ಸಮೂಹ ಎ ಅಧಿಕಾರಿಗಳು, ರವರ ಪತ್ರ ದಿ: 25/03/2004, 24/04/2004, 21/05/2004 ಮತ್ತು 01/06/2004

**ಪ್ರಸ್ತಾವನೆ:**

ಶ್ರೀಮತಿ ಕಮಲಮ್ಮ ಸಮೂಹ ಎ (ಕಿರಿಯ ಶ್ರೇಣಿ) ಅಧಿಕಾರಿ ಇವರು ಈ ಹಿಂದೆ ಕಾರ್ಯನಿರ್ವಾಹಕ ಅಧಿಕಾರಿಗಳು ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಈ ಕೆಳಕಂಡ ಆರೋಪಗಳಿಗೆ ಗುರಿಯಾಗಿದ್ದರು.

**ಆರೋಪ-1:** ಮೈಸೂರು ಅರಮನೆ ಶ್ರೀ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದಲ್ಲಿ ದಿ:24.8.1999 ರಿಂದ 4.9.1999ರವರೆಗೆ ನಡೆದ ಬ್ರಹ್ಮೋತ್ಸವ ಹಾಗೂ ದಿ:4.9.1999 ರಿಂದ 12.9.1999ರವರೆಗೆ ನಡೆದ ಕೃಷ್ಣೋತ್ಸವ ಉತ್ಸವಾದಿಗಳಿಗೆ ಮಂಜೂರಾದ ಮೊತ್ತವನ್ನು ನಿಗದಿತ ಸಮಯದಲ್ಲಿ ದೇವತಾ ಕಾರ್ಯಗಳಿಗೆ ಬಿಡುಗಡೆ ಮಾಡದೇ ಉತ್ಸವಾದಿಗಳು ಸುಗಮವಾಗಿ ನಡೆಸಲು ಸಹಕರಿಸದೇ ಉತ್ಸವಗಳು ಮುಗಿದ ನಂತರ ಓಚರ್ ನೀಡಿ ಹಣ ದುರುಪಯೋಗಪಡಿಸಿಕೊಂಡು ಕರ್ತವ್ಯ ಲೋಪ ಎಸಗಿರುವುದು.

**ಆರೋಪ-2:** ಮೈಸೂರು ಅರಮನೆ ಶ್ರೀ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದಲ್ಲಿ ದಿ:24.8.1999 ರಿಂದ 12.9.1999ರವರೆಗೆ ನಡೆದ ಬ್ರಹ್ಮೋತ್ಸವ ಹಾಗೂ ಕೃಷ್ಣೋತ್ಸವದ ವಿಶೇಷ ಧಾರ್ಮಿಕ ಕಾರ್ಯಕ್ರಮಗಳು ನಡೆಯುವುದು ತಿಳಿದಿದ್ದರೂ ಸಹ ದಿ:4.9.1999 ರಿಂದ 14.9.1999ರವರೆಗೆ ದೇವಸ್ಥಾನದ ಕಛೇರಿಗೆ ಹಾಜರಾಗದೇ ದೇವತಾ ಕಾರ್ಯಕ್ರಮಗಳು ಸುಗಮವಾಗಿ ನಡೆಯಲು ಸಹಕರಿಸದೇ, ಉದ್ದೇಶ ಪೂರ್ವಕವಾಗಿ ಗೈರು ಹಾಜರಾಗಿ ಕರ್ತವ್ಯ ಲೋಪ ಎಸಗಿರುವುದು.

**ಆರೋಪ-3:** ಮೈಸೂರು ಅರಮನೆ ಕೋಟೆ ಶ್ರೀ ವಿನಾಯಕಸ್ವಾಮಿ ಹಾಗೂ ಶ್ರೀ ಆಂಜನೇಯಸ್ವಾಮಿ ಮತ್ತು ಇತರೆ ದೇವಸ್ಥಾನಗಳ ಪುದುವಟ್ಟು ಹಣವನ್ನು ಏಪ್ರಿಲ್ 1999 ರಿಂದ ನವೆಂಬರ್ ಮಾಹೆ 1999ರವರೆಗೆ ರೂ.18,653-00 ಗಳನ್ನು ಅರಮನೆ ಮುಜರಾಯಿ ದೇವಸ್ಥಾನಗಳ ವ್ಯವಸ್ಥಾಪಕರಿಗೆ ನಿಗದಿತ ಅವಧಿಯಲ್ಲಿ ಬಿಡುಗಡೆ ಮಾಡದೇ ಪುದುವಟ್ಟು ಸೇವಾರ್ಥದಾರರು ಇಚ್ಚಿಸಿದ ಸೇವೆಗಳು ನಿಗದಿತ ದಿನಾಂಕಗಳಂದು ನಡೆಸಲು ಅವಕಾಶ ಕಲ್ಪಿಸದೇ, ಕರ್ತವ್ಯ ಲೋಪ ಎಸಗಿರುವುದು.

ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿ:19.09.2003ರ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಸದರಿಯವರ ಮೇಲಿನ ಆರೋಪದ ಬಗ್ಗೆ ಆರೋಪ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸರ್ಕಾರವು ಈ ಆರೋಪಣಾ ಪಟ್ಟಿಯನ್ನು ಶ್ರೀಮತಿ ಕಮಲಮ್ಮನವರಿಗೆ ಕಳುಹಿಸಿ, ಅವರ ಸಮಜಾಯಿಷಿ ಹೇಳಿಕೆಯನ್ನು ಕೇಳಲಾಗಿ ಸದರಿಯವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿ:25.3.2004 ಮತ್ತು ದಿ:24.4.2004ರ ಪತ್ರಗಳಲ್ಲಿ ದಿ:20.5.2004ರವರೆಗೆ ಕಾಲಾವಕಾಶ ನೀಡಲು ಕೋರಿದಂತೆ ಸರ್ಕಾರವು ದಿ:13.5.2004ರ ಪತ್ರದಲ್ಲಿ ದಿ:20.5.2004ರವರೆಗೆ ಕಾಲಾವಕಾಶವನ್ನು ನೀಡಲಾಗಿತ್ತು.

ಶ್ರೀಮತಿ ಕಮಲಮ್ಮರವರು ಪುನಃ ದಿ:21.5.2004ರ ಪತ್ರದಲ್ಲಿ ಅಗತ್ಯ ಮಾಹಿತಿಯನ್ನು ಕ್ರೋಢೀಕರಿಸಲು ಸಾಧ್ಯವಾಗುತ್ತಿಲ್ಲವೆಂದು ಸಮಜಾಯಿಷಿ ಹೇಳಿಕೆಯನ್ನು ನೀಡಲು ದಿ:31.5.2004ರವರೆಗೆ ಕಾಲಾವಕಾಶ ನೀಡಲು ಕೋರಿದ್ದರು. ನಂತರ ದಿ:1.6.2004ರ ಮನವಿಯಲ್ಲಿ ಅರಮನೆ

ಮುಜರಾಯಿ ಸಂಸ್ಥೆಗಳ ಕಛೇರಿ, ಚಾಮುಂಡಿಬೆಟ್ಟ, ಮೈಸೂರು ಮತ್ತು ಅರಮನೆ ಆಡಳಿತ ವ್ಯವಸ್ಥಾಪಕರ ಕಛೇರಿಗಳಲ್ಲಿ ದಾಖಲೆ ಪತ್ರಗಳನ್ನು ಪಡೆದು ವಿವರಣೆ ಸಲ್ಲಿಸಬೇಕಾಗಿದೆ ಎಂದು ದಿ:15.06.2004ರವರೆಗೆ ಕಾಲಾವಕಾಶವನ್ನು ವಿಸ್ತರಿಸಲು ಕೋರಿದ್ದರು. ದಿ:9.8.2004ರ ಸರ್ಕಾರದ ಪತ್ರದಲ್ಲಿ ಶ್ರೀಮತಿ ಕಮಲಮ್ಮನವರು ಕೋರಿರುವ ದಾಖಲೆಗಳನ್ನು ಒದಗಿಸುವಂತೆ ಕಾರ್ಯನಿರ್ವಾಹಕ ಅಧಿಕಾರಿಗಳು, ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರುರವರಿಗೆ ತಿಳಿಸಲಾಗಿತ್ತು. ಶ್ರೀಮತಿ ಕಮಲಮ್ಮರವರು ದಿ:15.8.2004ರಂದು ಶ್ರೀ ಚಾಮುಂಡೇಶ್ವರಿ ದೇವಸ್ಥಾನದ ಕಾರ್ಯನಿರ್ವಾಹಕರ ಕಛೇರಿಗೆ ಹಾಜರಾಗಿ ಲಭ್ಯವಿರುವ ಮಾಹಿತಿಯನ್ನು ಪಡೆದಿರುತ್ತಾರೆಂದು ಹೆಚ್ಚಿನ ಮಾಹಿತಿ ಕೋರಿದ್ದರಿಂದ ಈ ಹಿಂದೆ ಸದರಿಯವರ ಕಛೇರಿಯಲ್ಲಿ ವಿಷಯ ನಿರ್ವಾಹಕರಾಗಿ ಕೆಲಸ ನಿರ್ವಹಿಸುತ್ತಿದ್ದ, ಶ್ರೀ ಎನ್. ಧನಲಕ್ಷ್ಮಿ ರವರು ದಿ:27.9.2004ರಂದು ಹಾಜರಾಗಿದ್ದರೆಂದು, ಆದರೆ ಶ್ರೀಮತಿ ಕಮಲಮ್ಮ ನವರು ಕಛೇರಿಗೆ ಬಂದಿರುವುದಿಲ್ಲವೆಂಬ ಅಂಶವನ್ನು ತಮ್ಮ ದಿ:16.10.2004ರ ಪತ್ರದಲ್ಲಿ ಕಾರ್ಯನಿರ್ವಾಹಕ ಅಧಿಕಾರಿಗಳು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ. ಶ್ರೀಮತಿ ಕಮಲಮ್ಮನವರು ದಿ:11.8.2004ರಲ್ಲಿ ಮನವಿ ಸಲ್ಲಿಸಿ, ಇನ್ನೂ 15 ದಿನಗಳ ಕಾಲಾವಕಾಶವನ್ನು ಕೋರಿದ್ದರು. ಶ್ರೀಮತಿ ಕಮಲಮ್ಮನವರಿಗೆ ದೋಷಾರೋಪಣಾ ಪಟ್ಟಿಗೆ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಸಾಕಷ್ಟು ಸಮಯಾವಕಾಶ ನೀಡಿದ್ದರೂ, ಸದರಿಯವರು ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ಶ್ರೀಮತಿ ಕಮಲಮ್ಮನವರು ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಹಾಗೂ ಕಾನೂನನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಕಂಡುಬಂದಿದೆ. ಆದುದರಿಂದ ಈ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಈ ಆರೋಪಿತ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 315 ಮುಸೇವಿ 1999, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀಮತಿ ಕಮಲಮ್ಮ ಸಮೂಹ ಎ (ಕಿರಿಯ ಶ್ರೇಣಿ) ಅಧಿಕಾರಿಗಳು ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರು ಇವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಶ್ರೀ ಇಂಧುದರ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ.8, 15ನೇ ಕ್ರಾಸ್, ನೂರು ಅಡಿ ರಿಂಗ್ ರಸ್ತೆ, 5ನೇ ಫೇಸ್, ಜೆ.ಪಿ.ನಗರ, ಬೆಂಗಳೂರು-78 ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದೆ. ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಜಿ. ಶ್ರೀಧರ್, ಶಾಖಾಧಿಕಾರಿಗಳು, ಪ್ರಾರೋಪಣಾ ಶಾಖೆ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ವಿಧಾನ ಸೌಧ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ಮತ್ತು 11(ಎ) ರಲ್ಲಿನ ವಿಧಿವಿಧಾನಗಳಿಗನುಸಾರ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು 3 (ಮೂರು) ತಿಂಗಳೊಳಗಾಗಿ ಸರ್ಕಾರಕ್ಕೆ ಒಪ್ಪಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 24

**ರಮೇಶ್ ಕೆ. ಜಾಗೀರ್‌ದಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

## REVENUE SECRETARIAT

**Sub:** CENSUS OF INDIA - Updating of Rural - Urban Frame : 2001.

**Read:**
1. Letter No.9/38/2003-CD (Cen) dated 7th May, 2004 of the Registrar General, India, Ministry of Home Affairs, Government of India New Delhi.
2. D.O. No. TCH 27 C&T 2004 dated 1st June, 2004 of the Deputy Director, O/o the Director of Census Operations, Karnataka, Bangalore.

**Preamble:-**

The Registrar General, India, Ministry of Home Affairs, Government of India, New Delhi has in his letter read at Sl.No. 1 above proposed to update the Rural-Urban frame of the 2001 Census to the jurisdiction of Administrative Units prevailing as on date with a view to provide 2001 Census population data for the entitles in the updated frame. This has to be done taking into consideration the various jurisdictional charges that would have occured after March 2001 onwards till date.

The Deputy Director of Census Operations, Karnataka has in letter read at Sl.No. 2 above conveyed the request of the Registrar General, India to constitute a "Working Committee" of the Secretaries of various departments involved for the purpose mentioned above.

**Government Order No. RD 21 ETC 2004, Bangalore, Dated: 21st December 2004**

Government is pleased to constitute a 'Working Committee' in connection with the work of updating the Rural-Urban frame prepared for the 2001 Census. The Working Committee shall comprise of the following.

| | | | |
|---|---|---|---|
| 1. | The Chief Secretary to Government of Karnataka | - | Chair Person |
| 2. | The Secretary to Government, Revenue Department. | - | Member |
| 3. | The Principal Secretary to Government, Urban Development Department. | - | Member |
| 4. | The Secretary to Government, Rural Development and Panchayat Raj. | - | Member |
| 5. | The Deputy Director of Census Operations in Karnataka, Bangalore | - | Convenor |

2. The Committee shall initially meet to evolve a working plan to to ensure systematic collection, review and supply of the information relating to the various jurisdictional changes that have occured after March, 2001 till December, 2003.

3. Thereafter, the Committee shall meet as and when required to decide on the issues relating to compilation of the 2001 Census data for the changed jurisdictions as may be necessary.

4. The Committee may, if it so desires, Co-opt any other person/s as its member/s.

5. The Deputy Director of Census of Operations in Karnataka shall be the Convenor of the Committee.

By Order and in the name of the Governor of Karnataka,

**M.S. DESAI**

P.R. 25

Under Secretary to Government,

Revenue Department (Relief & Services-2)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ತುಂಗಭದ್ರಾ ಎಡದಂತೆ ಕಾಲುವೆಯನ್ನು ಶಾಶ್ವತವಾಗಿ ಬಲಪಡಿಸಲು ವಿಶೇಷ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ: 18.06.2004 ರಂದು ಮಾನ್ಯ ಜಲ ಸಂಪನ್ಮೂಲ ಹಾಗೂ ಸಾರಿಗೆ ಸಚಿವರ ಅಧ್ಯಕ್ಷತೆಯಲ್ಲಿ ಸದರಿ ವಿಷಯದ ಬಗ್ಗೆ ನಡೆದ ಸಭೆಯ ನಡವಳಿಗಳು.
2. ದಿನಾಂಕ: 25.09.2004 ರಂದು ಮಾನ್ಯ ಜಲ ಸಂಪನ್ಮೂಲ ಹಾಗೂ ಸಾರಿಗೆ ಸಚಿವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ತೆಗೆದುಕೊಳ್ಳಲಾದ ನಿರ್ಧಾರ.

**ಪ್ರಸ್ತಾವನೆ:**

1. ತುಂಗಭದ್ರಾ ಎಡದಂಡೆ ಕಾಲುವೆಯು ಸುಮಾರು 50 ವರ್ಷಗಳಷ್ಟು ಹಳೆಯದಾಗಿದ್ದು 227 ಕಿ.ಮೀ. ಉದ್ದವಿರುತ್ತದೆ. ಈ ಪೈಕಿ 107 ಕಿ.ಮೀ.ನಷ್ಟು ಉದ್ದ ಕಟಿಂಗ್‌ನಲ್ಲಿ ಇದ್ದು, ಪೂರ್ತಿ ಮಣ್ಣಿನ ಏರಿಯು 32 ಕಿ.ಮೀ. ಹಾಗೂ ಭಾಗಶಃ ಮಣ್ಣಿನ ಏರಿಯು 88 ಕಿ.ಮೀ. ಉದ್ದ ಇರುವ ಈ ಕಾಲುವೆಯು ಆಗಿಂದಾಗ್ಗೆ ಕೆಲವು ನಿರ್ದಿಷ್ಟ ಭಾಗಗಳಲ್ಲಿ ಒಡೆದು ಹೋಗುತ್ತಿರುತ್ತದೆ. ಇದರಿಂದಾಗಿ ಸರ್ಕಾರಕ್ಕೆ ಸಾಕಷ್ಟು ಆರ್ಥಿಕ ಹಾನಿ, ನೀರಿನ ಪೋಲು ಆಗುವುದಲ್ಲದೇ ಕೆಳಭಾಗದ ರೈತರಿಗೆ ಅಗತ್ಯ ಸಮಯದಲ್ಲಿ ನಿಗದಿತ ಪ್ರಮಾಣದ ನೀರನ್ನು ಒದಗಿಸುವುದು ಕಷ್ಟ ಸಾಧ್ಯವಾಗಿರುತ್ತದೆ. ಈ ಕಾರಣದಿಂದ ಮೇಲೆ ಕ್ರಮ ಸಂಖ್ಯೆ: (1)ರ ಸಭೆಯಲ್ಲಿ ತುಂಗಭದ್ರ ಎಡದಂಡೆ ಕಾಲುವೆಯನ್ನು ಆಧುನೀಕರಣಗೊಳಿಸಲು ತಾಂತ್ರಿಕ ಪರಿಣತರನ್ನು ಒಳಗೊಂಡ ಒಂದು ವಿಶೇಷ ಸಮಿತಿಯನ್ನು ರಚಿಸಿ ಸದರಿ ಸಮಿತಿಯು ನೀಡುವ ವರದಿಯನ್ನಾಧರಿಸಿ ಕ್ರಮ ಕೈಗೊಳ್ಳಬೇಕೆಂದು ನಿರ್ಧರಿಸಲಾಗಿತ್ತು. ಅದರಂತೆ ಮೇಲೆ ಕ್ರಮಸಂಖ್ಯೆ (2)ರ ಸಭೆಯಲ್ಲಿ ವಿಶೇಷ ಸಮಿತಿಯಲ್ಲಿ ಇರಬಹುದಾದ ತಾಂತ್ರಿಕ ಪರಿಣತರ ಪಟ್ಟಿಯನ್ನು ಈ ಕೆಳಕಂಡಂತೆ ನಿರ್ಧರಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 244 ಎಂಟಿಪಿ 2004, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004**

2. ತುಂಗಭದ್ರ ಎಡದಂಡೆ ಕಾಲುವೆಯನ್ನು ಶಾಶ್ವತವಾಗಿ ಬಲಪಡಿಸಲು ವಿಶೇಷ ಸಮಿತಿಯನ್ನು ಈ ಕೆಳಕಂಡಂತೆ ರಚಿಸಲಾಗಿದೆ.

| | | |
|---|---|---|
| 1. | ಕೆ.ಸಿ. ರೆಡ್ಡಿ, ಅಧ್ಯಕ್ಷರು<br>ತಾಂತ್ರಿಕ ಸಲಹಾ ಸಮಿತಿ, ಬೆಂಗಳೂರು. | ಅಧ್ಯಕ್ಷರು |
| 2. | ಹೆಚ್.ಎಸ್. ಚಿನಿವಾಲ್, ನಿವೃತ್ತ ಪ್ರಧಾನ ಇಂಜಿನಿಯರ್,<br>ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು. | ಸದಸ್ಯರು |
| 3. | ಸುಬ್ಬರಾವ್, ನಿವೃತ್ತ ಪ್ರೊಫೆಸರ್,<br>ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು. | ಸದಸ್ಯರು |
| 4. | ಸಿ.ಎಸ್. ವಿಶ್ವನಾಥ್, ನಿರ್ದೇಶಕರು,<br>ಟಾರ್ ಸ್ಟೀಲ್, ಬಸವನ ಗುಡಿ, ಬೆಂಗಳೂರು. | ಸದಸ್ಯರು |
| 5. | ಜೆ.ಎಂ. ಶಿರ್ಕೆ, ಜಂಟಿನಿರ್ದೇಶಕರು,<br>ಸಿ.ಡಬ್ಲ್ಯೂ.ಪಿ.ಆರ್.ಎಸ್. ಪೂಣೆ. | ಸದಸ್ಯರು |
| 6. | ಎನ್. ಘೋಷ್, ಹೆಚ್ಚುವರಿ ನಿರ್ದೇಶಕರು,<br>ಸಿ.ಡಬ್ಲ್ಯೂ.ಪಿ.ಆರ್.ಎಸ್., ಪೂಣೆ | ಸದಸ್ಯರು |
| 7. | ಶ್ರೀನಿವಾಸ ಮೂರ್ತಿ, ಪ್ರೊಫೆಸರ್,<br>ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು. | ಸದಸ್ಯರು |
| 8. | ಡಾ: ಎ. ಶ್ರೀಧರನ್,<br>ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು. | ಸದಸ್ಯರು |
| 9. | ಶಿವಕುಮಾರ್ ಬಾಬು, ಹಿರಿಯ ವಿಜ್ಞಾನಿ,<br>ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು. | ಸದಸ್ಯರು |
| 10. | ಪ್ರಧಾನ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ,<br>ಆನಂದರಾವ್ ವೃತ್ತ, ಬೆಂಗಳೂರು | ಸದಸ್ಯರು |
| 11. | ಸರ್ಕಾರದ ಉಪಕಾರ್ಯದರ್ಶಿ (ಎಂಎಂಐ)<br>ಜಲ ಸಂಪನ್ಮೂಲ ಸಚಿವಾಲಯ, ಬೆಂಗಳೂರು. | ಸದಸ್ಯರು |

| | | |
|---|---|---|
| 12. | ಆರ್.ಆರ್. ಕುಷ್ಟಗಿ, ನಿವೃತ್ತ ಮುಖ್ಯ ಇಂಜಿನಿಯರ್,<br>ಜಲ ಸಂಪನ್ಮೂಲ ಇಲಾಖೆ, ಗಂಗಾವತಿ, ಕೊಪ್ಪಳ ಜಿಲ್ಲೆ. | ಸದಸ್ಯರು |
| 13. | ಮುಖ್ಯ ಇಂಜಿನಿಯರ್,<br>ನೀರಾವರಿ ಕೇಂದ್ರ ವಲಯ, ಮುನಿರಾಬಾದ್ | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯು ತುಂಗಭದ್ರ ಎಡದಂಡೆ ಕಾಲುವೆಯನ್ನು ಪರಿವೀಕ್ಷಿಸಿ ಆಗಿಂದಾಗ್ಗೆ ಒಡೆದು ಹೋಗುತ್ತಿರುವ ಭಾಗಗಳನ್ನು ಪರಿಶೀಲಿಸಿ, ಅಧ್ಯಯನ ಮಾಡಿ, ಸೂಕ್ಷ್ಮ ಭಾಗಗಳನ್ನು ಗುರ್ತಿಸಿ, ಕೈಗೊಳ್ಳಬೇಕಾಗಿರುವ ಕ್ರಮಗಳ ಬಗ್ಗೆ ಸೂಕ್ತ ಶಿಫಾರಸ್ಸುಗಳೊಂದಿಗೆ ಸಲಹೆಗಳನ್ನು ನೀಡುತ್ತಾ ಕಾಲುವೆಯನ್ನು ಶಾಶ್ವತವಾಗಿ ಬಲಪಡಿಸುವ ಬಗ್ಗೆ ಜನವರಿ 2005ರ ಅಂತ್ಯದ ಒಳಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

2. ತುಂಗಭದ್ರ ಎಡದಂಡೆ ಕಾಲುವೆಯ ಬಗ್ಗೆ ತಾಂತ್ರಿಕ ವಿವರಗಳು, ನಕ್ಷೆಗಳು ಇನ್ನಿತರ ದಾಖಲೆ/ಮಾಹಿತಿಗಳನ್ನು ಸದರಿ ಸಮಿತಿಗೆ ಮುಖ್ಯ ಇಂಜಿನಿಯರ್, ನೀರಾವರಿ ಕೇಂದ್ರ ವಲಯ, ಮುನಿರಾಬಾದ್ ಹಾಗೂ ಪ್ರಧಾನ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ವೃತ್ತ, ಬೆಂಗಳೂರು, ಇವರು ಸಮಿತಿಗೆ ಅಗತ್ಯವಾಗಿರುವ ಹೈಡ್ರಾಲಿಕ್ ಹಾಗೂ ಇನ್ನಿತರ ಸಾಮಾನ್ಯ ವಿವರಗಳನ್ನು ಒದಗಿಸತಕ್ಕದ್ದು.

3. ಸದರಿ ಸಮಿತಿಯಲ್ಲಿರುವ ಅಧಿಕಾರೇತರ ಸದಸ್ಯರುಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 02 ಎಸ್.ಆರ್.ಎ. 2000, ದಿನಾಂಕ: 03-02-2001ರ ಆದೇಶದಂತೆ ಪ್ರವಾಸ ಮತ್ತು ಇತರ ಭತ್ಯೆಗಳನ್ನು ಪಾವತಿಸಲು ಲೆಕ್ಕಶೀರ್ಷಿಕೆ 2701 ಎಲ್.ಬಿ.ಸಿ. ಅಡಿಯಲ್ಲಿ ಮುಖ್ಯ ಇಂಜಿನಿಯರ್, ನೀರಾವರಿ ಕೇಂದ್ರ ವಲಯ, ಮುನಿರಾಬಾದ್ ಇವರು ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಿವಶಂಕರ್**
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ-1),
ಜಲ ಸಂಪನ್ಮೂಲ ಇಲಾಖೆ.

ಪಿ.ಆರ್. 26

## ಕಂದಾಯ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯ ಬರ ಉಸ್ತುವಾರಿ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ. ಆರ್‌ಡಿ 382 ಟಿಎನ್‌ಆರ್ 2002 ದಿನಾಂಕ 3.1.2003.
2. ಸರ್ಕಾರದ ಆದೇಶ ಸಂಖ್ಯೆ. ಆರ್‌ಡಿ 369 ಟಿಎನ್‌ಆರ್ 2003 ದಿನಾಂಕ 24.6.2003.
3. ಸರ್ಕಾರದ ಆದೇಶ ಸಂಖ್ಯೆ. ಆರ್‌ಡಿ 369 ಟಿಎನ್‌ಆರ್ 2003 ದಿನಾಂಕ 10.11.2003.
4. ಸರ್ಕಾರದ ಆದೇಶ ಸಂಖ್ಯೆ. ಆರ್‌ಡಿ 369 ಟಿಎನ್‌ಆರ್ 2003 ದಿನಾಂಕ 17.7.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇತೃತ್ವದಲ್ಲಿ ಪ್ರತಿಯೊಂದು ಕಂದಾಯ ವಿಭಾಗದಲ್ಲಿನ ಬರಪರಿಸ್ಥಿತಿಯನ್ನು ಅವಲೋಕಿಸಲು ಬರ ಉಸ್ತುವಾರಿ ಕೋಶವನ್ನು ದಿನಾಂಕ 1.12.2002 ರಿಂದ 30.6.2003 ರವರೆಗೆ ಸೃಜಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 24.6.2003 ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ 1.7.2003 ರಿಂದ 31.12.2003 ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ 10.11.2003ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ: 1.1.2004 ರಿಂದ 30.06.2004 ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (4) ರಲ್ಲಿ ಓದಲಾದ ದಿನಾಂಕ: 17.7.2004ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ: 1.7.2004 ರಿಂದ 31.12.2004 ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ರಾಜ್ಯದಲ್ಲಿ ಪ್ರಸ್ತುತ ಇರುವ ಬರಪರಿಸ್ಥಿತಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ಈಗಾಗಲೇ ಬಿಡುಗಡೆ ಮಾಡಿರುವ ಆಹಾರಧಾನ್ಯಗಳ ಬಳಕೆ ಹಾಗೂ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ಇನ್ನಿತರೆ ಉಳಿಕೆ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಈ ಬರ ಉಸ್ತುವಾರಿ ಕೋಶದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 608 ಟಿಎನ್‌ಆರ್ 2004, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯ ಕಾರ್ಯದರ್ಶಿಯವರ ನೇರ ನೇತೃತ್ವದಲ್ಲಿರುವ ಬರ ಉಸ್ತುವಾರಿ ಕೋಶಕ್ಕೆ ಮಂಜೂರಾಗಿರುವ 4 ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ವಿಶೇಷಾಧಿಕಾರಿ (ಬರ ಉಸ್ತುವಾರಿ ಕೋಶ) ಪೂರಕ ಸಿಬ್ಬಂದಿ ಸಹಿತ ಸದರಿ ಹುದ್ದೆಯನ್ನು ಬರ ಉಸ್ತುವಾರಿಗೆ ಸಂಬಂಧಿಸಿದಂತೆ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಷರತ್ತಿಗೊಳಪಟ್ಟು, ದಿನಾಂಕ 1.1.2005 ರಿಂದ 30.6.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

2. ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96ರ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಪರಿಹಾರ ಮತ್ತು ಸೇವೆಗಳು-2)

ಪಿ.ಆರ್. 27

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ಆದೇಶ ಸಂಖ್ಯೆ: ಗ್ರಾಅಪ 36 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004**

**ವಿಷಯ:** ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಯಾಂತ್ರಿಕ ಉಪ ವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಮಂಗಳೂರು ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ - ಆದೇಶ.

**ಓದಲಾಗಿದೆ:** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ, ಮಂಗಳೂರು ಇವರ ಪತ್ರ ಸಂಖ್ಯೆ. ದಕ:ಜಿಪಂ: ಆಡಳಿತ:(ಇಂ):ಸಿಆರ್:04-05, ದಿ: 4.8.04.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಪಂ, ದಕ್ಷಿಣಕನ್ನಡ, ಮಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿ: 4.8.04 ರ ವರದಿಯಲ್ಲಿ ಬಂಟ್ವಾಳ ಮತ್ತು ಉಲ್ಲಾಳ ಕ್ಷೇತ್ರದ ಬೋಳಿಯಾರ್ ಗ್ರಾಮದ ದೇವರಗುಂಡಿ ಎಂಬಲ್ಲಿ 2002-03 ರಲ್ಲಿ ಪ್ರಕೃತಿ ವಿಕೋಪ ನಿಧಿಯಿಂದ ನಿರ್ಮಿಸಿರುವ ತಡೆಗೋಡೆಯು ಕಳಪೆ ಕಾಮಗಾರಿಯಿಂದಾಗಿ ಗೋಡೆ ಬಿದ್ದು ಹೋಗಿದ್ದು, ಈ ರೀತಿ ಗೋಡೆ ಬೀಳಲು ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಯಾಂತ್ರಿಕ ಉಪ ವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಮಂಗಳೂರು ಇವರ ಅಸಮರ್ಪಕ ಕಾರ್ಯನಿರ್ವಹಣೆ ಮತ್ತು ಅವ್ಯವಹಾರವೇ ಕಾರಣವೆಂದು ಮೇಲ್ನೋಟಕ್ಕೆ ಕಂಡುಬಂದಿದ್ದು, ಇವರು ಕಾಮಗಾರಿಗಳ ಗುಣಮಟ್ಟದ ಬಗ್ಗೆ ಲಕ್ಷ್ಯ ವಹಿಸದೆ ಸರ್ಕಾರಿ ಕಾಮಗಾರಿಗಳನ್ನು ಸೂಕ್ತ ರೀತಿಯಲ್ಲಿ ನಿರ್ವಹಿಸುತ್ತಿಲ್ಲವೆಂದು ಇದರಿಂದಾಗಿ ಇವರು ತೀವ್ರ ಕರ್ತವ್ಯ ಲೋಪವೆಸಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿರುತ್ತಾರೆಂದೂ, ಇವರ ಅಧಿಕಾರದ ಅವಧಿಯಲ್ಲಿ ನಿರ್ವಹಿಸಿರುವ ಹೆಚ್ಚಿನ ಎಲ್ಲಾ ಕಾಮಗಾರಿಗಳ ಬಗ್ಗೆ ಗುರುತರ ದೂರು ಗಳಿದ್ದೂ ಇವರನ್ನು ಮುಂದಿನ ವಿಚಾರಣೆಗೆ ಒಳಪಡಿಸಿ ಸೇವೆಯಿಂದ ಅಮಾನತ್ತಿನಲ್ಲಿಡುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುವುದರಿಂದಲೂ

ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ವರದಿಯನ್ನು ಪರಿಶೀಲಿಸಿದಾಗ ಸದರಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರು ಕರ್ತವ್ಯದಲ್ಲಿ ತೀವ್ರ ಅಸಡ್ಡೆ ಮತ್ತು ಲೋಪ ವೆಸಗಿದ್ದಾರೆಂದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ;

ಇವರು ಎಸಗಿರುವ ಕರ್ತವ್ಯ ಲೋಪವು ಅವರ ಜವಾಬ್ದಾರಿ ಹುದ್ದೆಗೆ ಸಂಬಂಧಿಸಿರುವುದರಿಂದಲೂ ಮತ್ತು ಇದು ಅವರ ಕರ್ತವ್ಯಗಳ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸುವಂಥಹುದಾಗಿರುವುದರಿಂದಲೂ;

ವಿಷಯ, ಸಂದರ್ಭ, ಸನ್ನಿವೇಶಗಳನ್ನು ಮತ್ತು ಈಗ ಒದಗಿಬಂದ ದಾಖಲೆಗಳನ್ನು ಪರಿಗಣಿಸಲಾಗಿ ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಯಾಂತ್ರಿಕ ಉಪ ವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ದಕ್ಷಿಣ ಕನ್ನಡ, ಮಂಗಳೂರು ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಕೈಗೊಳ್ಳಲು ಅವಲೋಕಿಸಿರುವುದರಿಂದಲೂ;

ಮತ್ತು ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಯಾಂತ್ರಿಕ ಉಪ ವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರ್ ಇಲಾಖೆ, ದಕ್ಷಿಣ ಕನ್ನಡ, ಮಂಗಳೂರು ಇವರನ್ನು ಅಮಾನತ್ತಿನಲ್ಲಿಡುವುದು ಅಪೇಕಣೀಯವೆಂದು ಸರ್ಕಾರವು ಅಬಿಪ್ರಾಯಪಟ್ಟಿರುವುದರಿಂದಲೂ;

ಆದ್ದರಿಂದ, ಈಗ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ 1(ಡಿ) ಉಪ-ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಯಾಂತ್ರಿಕ ಉಪ ವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ದಕ್ಷಿಣ ಕನ್ನಡ, ಮಂಗಳೂರು ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಯಾಂತ್ರಿಕ ಉಪ ವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ದಕ್ಷಿಣ ಕನ್ನಡ, ಮಂಗಳೂರು ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ತಮ್ಮ ಕಛೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 28

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಆದೇಶ ಸಂಖ್ಯೆ: ಗ್ರಾಅಪ 48 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 1ನೇ ಜನವರಿ 2005**

**ವಿಷಯ:** ಶ್ರೀ ಬಿ.ಹೆಚ್. ಮಂಜುನಾಥ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ತಾಂತ್ರಿಕ ಉಪ ವಿಭಾಗ, ಬೆಂಗಳೂರು ದಕ್ಷಿಣ, ಬೆಂಗಳೂರು ಇವರ ಅಮಾನತ್ತಿನ ಬಗ್ಗೆ - ಆದೇಶ.

ದಿನಾಂಕ: 29.12.04 ರಂದು ಮಾನ್ಯ ಗ್ರಾಮೀಣ ನೀರು ಸರಬರಾಜು ರಾಜ್ಯ ಸಚಿವರು ಬೆಂಗಳೂರು (ದಕ್ಷಿಣ) ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಮತ್ತು ಉಪ ವಿಭಾಗಗಳಿಗೆ ಅನಿರೀಕ್ಷಿತ ಭೇಟಿ ನೀಡಿ ತಪಾಸಣೆ ನಡೆಸಿದಾಗ ಶ್ರೀ ಬಿ.ಹೆಚ್. ಮಂಜುನಾಥ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಬೆಂಗಳೂರು ದಕ್ಷಿಣ, ಬೆಂಗಳೂರು ಇವರು ಎರಡು ದಿವಸಗಳಿಂದ ಕರ್ತವ್ಯಕ್ಕೆ ಗೈರು ಹಾಜರಾಗಿದ್ದು, ಇವರ ಚಲನವಲನ ಮಾಹಿತಿಯಾಗಲೀ ಅಥವಾ ಮೇಲಾಧಿಕಾರಿಗಳಿಂದ ಅನುಮತಿ ಪಡೆದಿರುವುದಾಗಲೀ ಕಂಡುಬಾರದ್ದರಿಂದ, ಇವರು ಕರ್ತವ್ಯದಲ್ಲಿ ತೀವ್ರ ಅಸಡ್ಡೆ ಎಸಗಿದ್ದಾರೆಂದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ;

ಇವರು ಎಸಗಿರುವ ಕರ್ತವ್ಯ ಲೋಪವು ಅವರ ಜವಾಬ್ದಾರಿ ಹುದ್ದೆಗೆ ಸಂಬಂಧಿಸಿರುವುದರಿಂದಲೂ ಮತ್ತು ಇದು ಅವರ ಕರ್ತವ್ಯಗಳ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸುವಂಥವುಗಳಾಗಿ ಇರುವುದರಿಂದಲೂ;

ವಿಷಯ, ಸಂದರ್ಭ, ಸನ್ನಿವೇಶಗಳನ್ನು ಮತ್ತು ಈಗ ಒದಗಿಬಂದ ದಾಖಲೆಗಳನ್ನು ಪರಿಗಣಿಸಲಾಗಿ ಶ್ರೀ ಬಿ.ಹೆಚ್. ಮಂಜುನಾಥ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಬೆಂಗಳೂರು ದಕ್ಷಿಣ, ಬೆಂಗಳೂರು ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಕೈಗೊಳ್ಳಲು ಅವಲೋಕಿಸಿರುವುದರಿಂದಲೂ;

ಮತ್ತು ಶ್ರೀ ಬಿ.ಹೆಚ್. ಮಂಜುನಾಥ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಬೆಂಗಳೂರು ದಕ್ಷಿಣ, ಬೆಂಗಳೂರು ಇವರನ್ನು ಅಮಾನತ್ತಿನಲ್ಲಿಡುವುದು ಅಪೇಕ್ಷಣೀಯವೆಂದು ಸರ್ಕಾರವು ಅಭಿಪ್ರಾಯಪಟ್ಟಿರುವುದರಿಂದಲೂ;

ಆದ್ದರಿಂದ, ಈಗ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ 1(ಡಿ) ಉಪ-ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಹೆಚ್. ಮಂಜುನಾಥ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಬೆಂಗಳೂರು ದಕ್ಷಿಣ, ಬೆಂಗಳೂರು ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಬಿ.ಹೆಚ್. ಮಂಜುನಾಥ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಬಿ.ಹೆಚ್. ಮಂಜುನಾಥ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಬೆಂಗಳೂರು ದಕ್ಷಿಣ, ಬೆಂಗಳೂರು ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ತಮ್ಮ ಕಛೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 29 ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** 2004-2005ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣ ಗುಲ್ಬರ್ಗಾ ಜಿಲ್ಲಾ ಪಂಚಾಯತ್‌ಗೆ ಬಿಡುಗಡೆ ಮಾಡುವ (ಶೇ.25 ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ 17013 : 10 : 2004 ಎಸ್‌ಜಿಎಸ್‌ವೈ-I (13) ದಿನಾಂಕ 22.04.2004.
2. ಸಂಖ್ಯೆ ಆಇ 1091 ವೆಚ್ಚ 6: 2004 ದಿನಾಂಕ: 23.08.004.
3. ಸರ್ಕಾರದ ಆದೇಶದ ಸಮಸಂಖ್ಯೆ ದಿನಾಂಕ 17.09.2004.
4. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: 17013 : 10 : 2004 ಎಸ್.ಜಿ.ಎಸ್.ವೈ I (58) ದಿನಾಂಕ: 16.11.2004.

**ಪ್ರಸ್ತಾವನೆ:**

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಉಲ್ಲೇಖಿತ ಪತ್ರ (1) ಮತ್ತು (3) ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್ ಜಿ ಎಸ್ ವೈ) ಒಂದನೇ ಕಂತಿನ ಹಣ ರೂ.20,03,38,000-00 ಮತ್ತು ರೂ. 6,67,79,000 ಗಳನ್ನು ಅನುಕ್ರಮವಾಗಿ ಬಿಡುಗಡೆ ಮಾಡಿದೆ. ಕೇಂದ್ರ ಸರ್ಕಾರವು ಗುಲ್ಬರ್ಗಾ ಜಿಲ್ಲೆಗೆ ಎರಡನೇ ಕಂತಿನ ಕೇಂದ್ರ ಪಾಲಿನ ಹಣ ರೂ.1,15,13,000 ಗಳನ್ನು ಬಿಡುಗಡೆ ಮಾಡಲಾಗಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಹಣ ರೂ.38,38,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 18 ಸ್ವಜಯೋ 2004, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2004**

ರಾಜ್ಯ ಸರ್ಕಾರವು ಗುಲ್ಬರ್ಗಾ ಜಿಲ್ಲಾ ಪಂಚಾಯತ್‌ಗೆ ಎರಡನೇ ಕಂತಿನ ಹಣ ರೂ.38,38,000-00 (ರೂ.ಮೂವತ್ತೆಂಟು ಲಕ್ಷದ ಮೂವತ್ತೆಂಟು ಸಾವಿರ ಮಾತ್ರ) ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

1999ನೇ ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-07-ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ-ಯೋಜನೆ 2004-2005 (2501-01-196-1-07) ರಡಿ ಭರಿಸತಕ್ಕದ್ದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2004-2005ನೇ ಸಾಲಿನ ಅನುಮೋದಿತ ವಾರ್ಷಿಕ ಕ್ರಿಯಾ ಯೋಜನೆಯನ್ನು ಸಂಬಂಧಿಸಿದ ಉಪಕಾರ್ಯದರ್ಶಿ (ಅಭಿವೃದ್ಧಿ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 408 ಪಿಬಿಎಸ್ 2004 ದಿನಾಂಕ 21.12.2004 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.215 ದಿನಾಂಕ 29.12.2004 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಮ್. ಶಿವಪ್ರಕಾಶ್**

ಪಿ.ಆರ್. 30 ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆ ಹೊಳೇನರಸೀಪುರ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಸ್ತೆಶಾಖೆ:ಮೇಲ್ದರ್ಜೆ:ಸಇಂ7:2004-05, ದಿನಾಂಕ:31-12-2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ ಈ ಕೆಳಕಂಡ 13 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಬಿ.ಟಿ. ರಸ್ತೆಯ ಕಿಮೀ 60 ರಿಂದ ಕಡವಿನಕೋಟೆಯ ರಸ್ತೆ | 1.50 |
| 2 | ಬಿ.ಟಿ. ರಸ್ತೆಯ ಕಿಮೀ 61 ರಿಂದ ಹಿರೇಬೆಳಗುಲ ರಸ್ತೆ | 1.60 |
| 3 | ಬಿ.ಟಿ. ರಸ್ತೆಯ ಕಿಮೀ 69 ರಿಂದ ಭೀಮನಹಳ್ಳಿ ರಸ್ತೆ | 1.80 |
| 4 | ಬಿ.ಟಿ. ರಸ್ತೆಯ ಕಿಮೀ 68 ರಿಂದ ಚನ್ನಾಪುರ ರಸ್ತೆ | 0.90 |
| 5 | ಸಿ.ಎನ್.ಕೆ. ರಸ್ತೆಯ ಕಿಮೀ 37 ರಿಂದ ಮೂಲೇಕಾಳೇನಹಳ್ಳಿ ರಸ್ತೆ | 3.00 |
| 6 | ಸಿ.ಎನ್.ಕೆ. ರಸ್ತೆಯ ಕಿಮೀ 38 ರಿಂದ ಉಲಿವಾಲ ಕೊಪ್ಪಲು ರಸ್ತೆ | 1.90 |
| 7 | ಸಿ.ಎನ್.ಕೆ. ರಸ್ತೆಯ ಕಿಮೀ 38.50 ರಿಂದ ಉಲಿವಾಲ ರಸ್ತೆ | 1.50 |
| 8 | ಬಿ.ಟಿ. ರಸ್ತೆಯ ಕಿಮೀ 69.50 ರಿಂದ ಮಾವಿನಕೆರೆ ರೈಲ್ವೆ ನಿಲ್ದಾಣದ ರಸ್ತೆ ಮಾರ್ಗ ಹಳೇಕೋಟೆ ಮಾಧವರಾಯನಗುಡಿ ರಸ್ತೆ | 0.60 |
| 9 | ಬಿ.ಟಿ. ರಸ್ತೆಯ ಕಿಮೀ 54.50 ರಿಂದ ಎಸ್ ಅಂಕನಹಳ್ಳಿ ರಸ್ತೆ | 1.20 |
| 10 | ಬಿ.ಟಿ. ರಸ್ತೆಯ ಕಿಮೀ 69 ರಿಂದ ಮಾವಿನಕೆರೆ ರೈಲ್ವೆ ನಿಲ್ದಾಣ ರಸ್ತೆ | 1.90 |
| 11 | ಸಿ.ಎನ್. ರಸ್ತೆಯ ಕಿಮೀ 37.50 ಕಿಮೀ ನಿಂದ ಅಡಿಕೆಕೆರೆ ಹೊಸೂರು ರಸ್ತೆ | 3.00 |
| 12 | ಸಿ.ಎನ್.ಎಸ್. ರಸ್ತೆಯ ಕಿಮೀ 42 ರಿಂದ ಜಕ್ಕವಳ್ಳಿರಸ್ತೆ | 1.20 |
| 13 | ಸಿ.ಎನ್.ಎಸ್. ರಸ್ತೆಯ ಕಿಮೀ 58 ರಿಂದ ಚಿಗಹಳ್ಳಿ ರಸ್ತೆ | 1.50 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 128 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ 13 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಬಿ.ಟಿ. ರಸ್ತೆಯ ಕಿಮೀ 60 ರಿಂದ ಕಡವಿನಕೋಟೆಯ ರಸ್ತೆ | 1.50 |
| 2 | ಬಿ.ಟಿ. ರಸ್ತೆಯ ಕಿಮೀ 61 ರಿಂದ ಹಿರೇಬೆಳಗುಲ ರಸ್ತೆ | 1.60 |
| 3 | ಬಿ.ಟಿ. ರಸ್ತೆಯ ಕಿಮೀ 69 ರಿಂದ ಭೀಮನಹಳ್ಳಿ ರಸ್ತೆ | 1.80 |
| 4 | ಬಿ.ಟಿ. ರಸ್ತೆಯ ಕಿಮೀ 68 ರಿಂದ ಚನ್ನಾಪುರ ರಸ್ತೆ | 0.90 |
| 5 | ಸಿ.ಎನ್.ಕೆ. ರಸ್ತೆಯ ಕಿಮೀ 37 ರಿಂದ ಮೂಲೇಕಾಳೇನಹಳ್ಳಿ ರಸ್ತೆ | 3.00 |
| 6 | ಸಿ.ಎನ್.ಕೆ. ರಸ್ತೆಯ ಕಿಮೀ 38 ರಿಂದ ಉಲಿವಾಲ ಕೊಪ್ಪಲು ರಸ್ತೆ | 1.90 |
| 7 | ಸಿ.ಎನ್.ಕೆ. ರಸ್ತೆಯ ಕಿಮೀ 38.50 ರಿಂದ ಉಲಿವಾಲ ರಸ್ತೆ | 1.50 |
| 8 | ಬಿ.ಟಿ. ರಸ್ತೆಯ ಕಿಮೀ 69.50 ರಿಂದ ಮಾವಿನಕೆರೆ ರೈಲ್ವೆ ನಿಲ್ದಾಣದ ರಸ್ತೆ ಮಾರ್ಗ ಹಳೇಕೋಟೆ ಮಾಧವರಾಯನಗುಡಿ ರಸ್ತೆ | 0.60 |
| 9 | ಬಿ.ಟಿ. ರಸ್ತೆಯ ಕಿಮೀ 54.50 ರಿಂದ ಎಸ್ ಅಂಕನಹಳ್ಳಿ ರಸ್ತೆ | 1.20 |
| 10 | ಬಿ.ಟಿ. ರಸ್ತೆಯ ಕಿಮೀ 69 ರಿಂದ ಮಾವಿನಕೆರೆ ರೈಲ್ವೆ ನಿಲ್ದಾಣ ರಸ್ತೆ | 1.90 |
| 11 | ಸಿ.ಎನ್. ರಸ್ತೆಯ ಕಿಮೀ 37.50 ನಿಂದ ಅಡಿಕೆಕೆರೆ ಹೊಸೂರು ರಸ್ತೆ | 3.00 |
| 12 | ಸಿ.ಎನ್.ಎಸ್. ರಸ್ತೆಯ ಕಿಮೀ 42 ರಿಂದ ಜಕ್ಕವಳ್ಳಿರಸ್ತೆ | 1.20 |
| 13 | ಸಿ.ಎನ್.ಎಸ್. ರಸ್ತೆಯ ಕಿಮೀ 58 ರಿಂದ ಚಿಗಹಳ್ಳಿ ರಸ್ತೆ | 1.50 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 31

**ಶೇಖ್ ಅಬ್ದುಲ್ ವಾಜಿದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

## ENERGY SECRETARIAT

**Sub:** Karnataka Electricity Regulatory Commission - Release of Third quarter Fund to KERC out of the provision made in the Budget Estimates for the year 2004-05. - Orders reg.

**Read:** Letter No.F/01/1/2041 dated 6.12.2004.

**Preamble:-**

A sum of Rs.320.50 lakhs has been provided in the Budget estimates for the year 2004-05 under the Head of Account 2801-80-101-1-07-KERC-101-GIA (Non-Plan). In the letter dated 6.12.2004 read above, Secretary, KERC has requested to recoup the Permanent Imprest by releasing Rs.56.19 lakhs to meet the expenditures in the Third quarter of the year 2004-2005 (based on actual expenditure) in order to maintain the balance of Rs.75 lakhs in the Permanent Imprest Account sanctioned vide G.O. dated 19.10.2002. Hence, this order.

**Government Order No. DE 30 PSR 2001, Bangalore, Dated: 30th December 2004**

In the circumstances explained in the preamble, Government are pleased to release, the amount of Rs.56.19 lakhs (Rupees Fifty Six Lakhs Nineteen Thousand Only) based on the actual expenditure

incurred by the Karnataka Electricity Regulatory Commission (KERC) under the Head of Account "2801-80-101-1-07-KERC-101-GIA (Non-Plan)" to meet the expenditure for the Third (III) Quarter of the year 2004-05 and to maintain the balance of Rs.75.00 lakhs in the Permanent Imprest Account.

The Principal Secretary to Government, Energy Department is authorised to countersign the bill and to draw and disburse the amount to KERC on the payees receipt signed and submitted by the Secretary, KERC.

This Order issues with the concurrence of the Finance Department vide their U.O. Note No. FD/1725/Exp-1/2004 dated 27.12.2004.

By Order and in the name of the Governor of Karnataka,

P.R. 32

**K.L. JAYARAM**

Under Secretary to Government, Energy Department

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸನೀಇ 51 ಮಸಾವಿ 2003(ಭಾಗ) ದಿನಾಂಕ:06-12-2003.
2. ದಿನಾಂಕ:8.11.2004ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಮುಇಂ/ ಸನೀರಾ/ತಾಸ-1/2004-05/2174.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 6.12.2003ರ ಸರ್ಕಾರಿ ಆದೇಶದಲ್ಲಿ ಸಣ್ಣ ನೀರಾವರಿ ಕಾಮಗಾರಿಗಳ 30.00 ಲಕ್ಷ ರೂ.ಗಳ ಹಾಗೂ ಹೆಚ್ಚಿನ ಅಂದಾಜುಳ್ಳ ಪ್ರಸ್ತಾವನೆಗಳನ್ನು ತಾಂತ್ರಿಕವಾಗಿ ಪರಿಶೀಲಿಸುವ ಸಲುವಾಗಿ 13 (ಹದಿಮೂರು) ಸದಸ್ಯರನ್ನೊಳಗೊಂಡ ಪುನರ್ ರಚಿಸಲಾಗಿದ್ದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಕಾಲಾವಧಿಯು ದಿನಾಂಕ:15.12.2003ಕ್ಕೆ ಅಂತ್ಯಗೊಂಡಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರದಲ್ಲಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಕಾಲಾವಧಿಯು ಮುಕ್ತಾಯಗೊಂಡಿರುವುದರಿಂದ ಸಮಿತಿಯನ್ನು ಮುಂದುವರೆಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 158 ಮಸಾವಿ 2004, ಬೆಂಗಳೂರು, ದಿನಾಂಕ: 3ನೇ ಜನವರಿ 2005**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯ 30.00 ಲಕ್ಷ ರೂ.ಗಳ ಹಾಗೂ ಹೆಚ್ಚಿನ ಅಂದಾಜುಳ್ಳ ಕಾಮಗಾರಿಗಳ ಪ್ರಸ್ತಾವನೆಗಳನ್ನು ತಾಂತ್ರಿಕವಾಗಿ ಪರಿಶೀಲಿಸುವ ಸಲುವಾಗಿ ದಿನಾಂಕ: 6.12.2003ರ ಆದೇಶ ಸಂಖ್ಯೆ: ಸನೀಇ 51 ಮಸಾವಿ 2003(ಭಾಗ) ರಲ್ಲಿಯ ಸದಸ್ಯರನ್ನೊಳಗೊಂಡ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ತಾತ್ಕಾಲಿಕವಾಗಿ ಮುಂದಿನ ಆದೇಶದವರೆಗೆ ಮುಂದುವರೆಸಲಾಗಿದೆ.

ಈ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರಿ ಆದೇಶ ಸಂಖ್ಯೆ:ಆಇ 2 ಸನಿತಿ 99, ದಿನಾಂಕ:22.4.99ರಂತೆ ಪ್ರಯಾಣ ಭತ್ಯೆ, ಉಪಸ್ಥಿತಿ ಭತ್ಯೆ ಹಾಗೂ ದಿನ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 33

**ಎಂ.ಎನ್. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎಲ್. ಹನುಮಂತರಾಜು, ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ, ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**
1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಆದೇಶ ಸಂಖ್ಯೆ:ಸಿ3:ಶಿಸ್ತು:ರೇವಿಅ:24:2001-02 ದಿನಾಂಕ:7.11.2001.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ3:ಶಿಸ್ತು:ರೇವಿಅ:24: 2001-02 ದಿನಾಂಕ:11.4.2002.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಆದೇಶ ಸಂಖ್ಯೆ:ಸಿ3:ಶಿಸ್ತು:ರೇವಿಅ:24:2001-02 ದಿನಾಂಕ:24.6.2002.
4. ರೇಷ್ಮೆ ಜಂಟಿ ನಿರ್ದೇಶಕರು, ಮೈಸೂರು ಮತ್ತು ವಿಚಾರಣಾಧಿಕಾರಿಗಳು, ಇವರ ಪತ್ರ ಸಂಖ್ಯೆ:ಜಂನಿ/ಮೈ/ಸಿಬ್ಬಂದಿ-3/ ಶಿ.ಕ್ರಮ/5/2002-03 ದಿನಾಂಕ:29.8.2003.
5. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ತಿಳುವಳಿಕೆ ಪತ್ರ ಸಂಖ್ಯೆ:ಸಿ3:ಶಿಸ್ತು:ರೇವಿಅ: 24:2001-02 ದಿನಾಂಕ:30.9.2003.
6. ಶ್ರೀ ಎಲ್. ಹನುಮಂತರಾಜು, ರೇಷ್ಮೆ ವಿಸ್ತರಣಾಧಿಕಾರಿ, ಇವರ ಲಿಖಿತ ಹೇಳಿಕೆ ದಿನಾಂಕ: 10.10.2003.
7. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಸಿ3:ಶಿಸ್ತು:ರೇವಿಅ: 24:2001-02 ದಿನಾಂಕ:10.12.2003.
8. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿಬ್ಬಂದಿ:ಸಿ3:ಶಿಸ್ತು: ರೇವಿಅ:24:2001-02 ದಿನಾಂಕ:13.2.2004.
9. ಕಾರ್ಯದರ್ಶಿ, ಲೋಕಸೇವಾ ಆಯೋಗ, ಇವರ ಪತ್ರ ಸಂಖ್ಯೆ ಪಿಎಸ್‌ಸಿ 30 ಸಿಎನ್‌ಎಸ್/2004, ದಿನಾಂಕ: 12.6.2004.

**ಪ್ರಸ್ತಾವನೆ:**

ರೇಷ್ಮೆ ಇಲಾಖೆಯ ಶ್ರೀ ಎಲ್. ಹನುಮಂತರಾಜು, ರೇಷ್ಮೆ ವಿಸ್ತರಣಾಧಿಕಾರಿ, ಇವರ ವಿರುದ್ಧ ಈ ಕೆಳಕಂಡ ಆರೋಪಗಳನ್ನು ಮಾಡಲಾಗಿತ್ತು.

(ಅ) ಕುಮಾರಿ ಎ.ಸಿ. ಚಂದ್ರಕಲಾ, ರೇಷ್ಮೆ ನಿರೀಕ್ಷಕರು, ಇವರಿಗೆ ಲೈಂಗಿಕ ಕಿರುಕುಳ ಮತ್ತು ಮಾನಸಿಕ ಹಿಂಸೆ ನೀಡುವುದು.

(ಆ) ಕುಮಾರಿ ಎ.ಸಿ. ಚಂದ್ರಕಲಾ, ರೇಷ್ಮೆ ನಿರೀಕ್ಷಕರು, ಇವರಿಗೆ ರಜೆ ಮಂಜೂರು ಮಾಡದಿರುವುದು, ಏಕವಚನದಲ್ಲಿ ಸಂಭೋಧಿಸುವುದು.

(ಇ) ಅವರ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಜಾತಿಯ ಹೆಸರನ್ನು ಪ್ರಸ್ತಾಪಿಸುವ ಮೂಲಕ ಜವಾಬ್ದಾರಿಯುತ ಸರ್ಕಾರಿ ನೌಕರನಲ್ಲದ ನಡತೆ ತೋರುವುದು.

(ಈ) ಮೇಲಾಧಿಕಾರಿಗಳಿಗೆ ಅವರ ಜಾತಿಯನ್ನು ಹೆಸರಿಸಿ ಬೆದರಿಕೆ ತಂತ್ರಗಳನ್ನು ಬಳಸುವುದು.

(ಉ) ಅವರಿಗೆ ಬಡ್ತಿ ನೀಡುವಲ್ಲಿ ಅನ್ಯಾಯವಾಗಿದೆ ಎಂಬುದಾಗಿ ಕಛೇರಿಯಲ್ಲಿ ಅನಾವಶ್ಯಕವಾಗಿ ಲೇಖನಿ ಸ್ಥಗಿತ, ಮುಷ್ಕರ ನಡೆಸುವುದು.

(ಊ) ಖಜಾನೆಯಿಂದ ರೂ. 4,327.00 ಗಳನ್ನು ಡ್ರಾ ಮಾಡಿ ಅದನ್ನು ಸರಬರಾಜು ಸಂಸ್ಥೆಗೆ ಸಂದಾಯ ಮಾಡದಿರುವುದು.

2. ಆ ಹಿನ್ನೆಲೆಯಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮತ್ತು ರೇಷ್ಮೆ ನಿರ್ದೇಶಕರು, ಆದೇಶ ಸಂಖ್ಯೆ: ಸಿ3/ಶಿಸ್ತು/ರೇವಿಅ/24/2001-02, ದಿನಾಂಕ: 7.11.2001ರಲ್ಲಿ ಶ್ರೀ ಎಲ್. ಹನುಮಂತರಾಜು, ರೇಷ್ಮೆ ವಿಸ್ತರಣಾಧಿಕಾರಿ, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ನಂತರ ಆದೇಶ ಸಂಖ್ಯೆ: ಸಿ3/ಶಿಸ್ತು/ರೇವಿಅ/24/2001-02, ದಿನಾಂಕ:11.4.2002ರಲ್ಲಿ ಮರುನೇಮಿಸಿದ್ದರು. ತದನಂತರ ಆದೇಶ ಸಂಖ್ಯೆ ಸಿ3/ಶಿಸ್ತು/ರೇವಿಅ/24/2001-02, ದಿನಾಂಕ: 24.6.2002ರಲ್ಲಿ ಅವರ ವಿರುದ್ಧದ ಆರೋಪಗಳ ಕುರಿತಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ನಿಯಮ 11ರಡಿ ವಿಧಿಸಿರುವ ವಿಧಾನ ಅನುಸರಿಸಿ ವಿಚಾರಣೆ ನಡೆಸಲು ಜಂಟಿ ನಿರ್ದೇಶಕರು, ಮೈಸೂರು ವಿಭಾಗ, ಇವರಿಗೆ ಸೂಚಿಸಿದ್ದರು. ಆ ಅಧಿಕಾರಿ ಪತ್ರ ಸಂಖ್ಯೆ: ಜಂನಿ/ಮೈ/ಸಿ3/ಶಿ.ಕ್ರಮ/5/2002-03, ದಿನಾಂಕ: 29.8.2003ರ ಜೊತೆಗೆ ವಿಚಾರಣಾ ವರದಿ ಸಲ್ಲಿಸಿರುತ್ತಾರೆ.

3. ವಿಚಾರಣಾ ಸಮಯದಲ್ಲಿ ಪರಿಶೀಲಿಸಲಾದ ದಾಖಲಾತಿ : ಸಾಕ್ಷಿ : ಹೇಳಿಕೆ ಇವುಗಳ ಪ್ರಕಾರ ಶ್ರೀ ಎಲ್. ಹನುಮಂತರಾಜು, ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯ ಪಡೆಯಲಾಗಿದೆ. ವಿಚಾರಣಾ ವರದಿಯ ಪ್ರತಿಯನ್ನು ಎರಡನೇ ಕಾರಣ ಕೇಳುವ ನೋಟೀಸಿನ ರೂಪದಲ್ಲಿ ಆಪಾದಿತ ನೌಕರರಿಗೆ ದಿನಾಂಕ: 30.9.2003ರಂದು ಜಾರಿಗೊಳಿಸಲಾಗಿತ್ತು. ಆ ಕುರಿತಂತೆ ಅವರು ದಿನಾಂಕ: 10.10.2003ರಂದು ಉತ್ತರ ಸಲ್ಲಿಸುತ್ತಾ ವಿಚಾರಣಾಧಿಕಾರಿಗಳ ನಿರ್ಣಯವನ್ನು ಅಲ್ಲಗಳೆದಿದ್ದು ಇಲಾಖೆಯ ಕೆಲವು ಉನ್ನತ ಅಧಿಕಾರಿಗಳನ್ನು ಅಸಂಸದೀಯ : ಅವಾಚ್ಯ ಪದಗಳಿಂದ ನಿಂದಿಸಿರುತ್ತಾರೆ. ಅವರ ನಿಲುವನ್ನು ಸಮರ್ಥಿಸಿಕೊಳ್ಳಲು ಯಾವುದೇ ದಾಖಲಾತಿ ಸಲ್ಲಿಸಿರುವುದಿಲ್ಲ. ಆದುದರಿಂದ ಆರೋಪಗಳು ಸಾಬೀತಾಗಿವೆ.

4. ಶ್ರೀ ಎಲ್. ಹನುಮಂತರಾಜು, ರೇಷ್ಮೆ ವಿಸ್ತರಣಾಧಿಕಾರಿ, ಇವರು ದುರ್ನಡತೆ ಹಾಗೂ ಕರ್ತವ್ಯಲೋಪ ಎಸಗುವ ಪ್ರವೃತ್ತಿಯವರಾಗಿದ್ದು ಇವರನ್ನು ಸೇವೆಯಲ್ಲಿ ಮುಂದುವರೆಸಿದ್ದಲ್ಲಿ ಇಲಾಖೆಯಲ್ಲಿ ಶಿಸ್ತಿಗೆ ಭಂಗ ಉಂಟಾಗುವ ಕಾರಣ ಅವರನ್ನು ಸೇವೆಯಲ್ಲಿ ಮುಂದುವರೆಸುವುದು ಸೂಕ್ತವಲ್ಲವೆಂಬುದಾಗಿ ಅಭಿಪ್ರಾಯಪಡುತ್ತಾ ಅವರ ವಿರುದ್ಧದ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳ (1957) ನಿಯಮ 8ರಡಿ ನಮೂದಿಸಿರುವ ಕಠಿಣ ದಂಡನೆ ವಿಧಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

5. ಇದಕ್ಕೆ ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನೆ) ನಿಬಂಧನೆಗಳ (2000) ನಿಬಂಧನೆ 5ರನ್ವಯ ಅವರ ಸಹಮತಿಯನ್ನು (ಪತ್ರ ಸಂಖ್ಯೆ: ಪಿಎಸ್‌ಸಿ/30/ಸಿಎಸ್‌ಎಸ್/2004, ದಿನಾಂಕ:12.06.2004) ಪಡೆಯಲಾಗಿದ್ದು ಆರೋಪಿತ ನೌಕರರಿಂದ ಸರ್ಕಾರಕ್ಕೆ ಉಂಟಾದ ನಷ್ಟಕ್ಕೆ ಸಮನಾದ ಮೊತ್ತವನ್ನು (ರೂ. 4327.00) ಸಹ ಅವರಿಂದ ವಸೂಲಿ ಮಾಡಬೇಕೆಂಬುದಾಗಿ ತಿಳಿಸಿರುತ್ತಾರೆ.

6. ಈ ಕಾರಣಗಳಿಂದಾಗಿ ರೇಷ್ಮೆ ಆಯುಕ್ತರ ಶಿಫಾರಸ್ಸನ್ನು ಹಾಗೂ ಕರ್ನಾಟಕ ಲೋಕಸೇವಾ ಆಯೋಗದ ಸಲಹೆಯನ್ನು ಸರ್ಕಾರವು ಒಪ್ಪಿಕೊಂಡು ಶ್ರೀ ಎಲ್. ಹನುಮಂತರಾಜು, ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು (1957) ನಿಯಮ 8 (VI) ರನ್ವಯ ಸರ್ಕಾರಿ ಸೇವೆಯಿಂದ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 83 ರೇಸೇವಿ 2004, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಲ್. ಹನುಮಂತರಾಜು, ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು (1957) ನಿಯಮ 8 (VI) ರ ಪ್ರಕಾರ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ಸರ್ಕಾರವು ವಿಧಿಸಿದೆ.

ಶ್ರೀ ಎಲ್. ಹನುಮಂತರಾಜು, ರೇಷ್ಮೆ ವಿಸ್ತರಣಾಧಿಕಾರಿ, ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟ ರೂ.4327-00 (ರೂ. ನಾಲ್ಕು ಸಾವಿರದ ಮುನ್ನೂರ ಇಪ್ಪತ್ತೇಳು ಮಾತ್ರ) ಗಳನ್ನು ಇವರ ನಿವೃತ್ತಿ ಸೌಲಭ್ಯದಿಂದ ವಸೂಲಿ ಮಾಡಲು ಸಹ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 34

**ಮಂಜೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಿ.ಕೆ. ಶ್ರೀನಿವಾಸರಾವ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ರವರ ವಿರುದ್ಧ ಇಲಾಖಾ ವಿಚಾರಣೆ ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ಸರ್ಕಾರದ ಸಚಿವಾಲಯ ಇಲಾಖಾ ಉಪಹಾರ ಮಂದಿರದ ಉಪಸಮಿತಿ ದಿನಾಂಕ:8.10.1996ರ ವರದಿ.
2. ರಾಜ್ಯ ಲೆಕ್ಕಪತ್ರ ಇಲಾಖೆ ನಿರ್ದೇಶಕರ ವರದಿ ಪತ್ರ ಸಂ. ರಾಲೆಪ 6 ವಿಶೇಷ ತನಿಖೆ 97 ದಿನಾಂಕ:28.5.1998.
3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 104 ಎಸ್‌ಇಎನ್ 96 ದಿನಾಂಕ: 31.12.2001.
4. ಶ್ರೀ ಸೋಸಲೆ ಇಂದುದರ, ನಿವೃತ್ತ ಜಿಲ್ಲಾ ನ್ಯಾಯಾಧೀಶರ ವಿಚಾರಣಾ ವರದಿ ದಿನಾಂಕ: 15.9.2003.
5. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಸಿಆಸುಇ 104 ಎಸ್‌ಇಎನ್ 96 ದಿನಾಂಕ: 7.10.2003.
6. ಶ್ರೀ ಬಿ.ಕೆ. ಶ್ರೀನಿವಾಸರಾವ್ ರವರ ದಿನಾಂಕ: 3.11.2003ರ ಉತ್ತರ.
7. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಕ್ರಮಾಂಕ:ಪಿಎಸ್‌ಸಿ 69 ಸಿಎನ್‌ಎಸ್ 2004 ದಿನಾಂಕ:4.9.2004.

**ಪ್ರಸ್ತಾವನೆ:**

ಶ್ರೀ ಬಿ.ಕೆ. ಶ್ರೀನಿವಾಸರಾವ್, ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿದ ಅಧೀನ ಕಾರ್ಯದರ್ಶಿರವರು 1991 ರಿಂದ 96ರವರೆಗೆ ಶಾಖಾಧಿಕಾರಿಯಾಗಿ, ಕರ್ನಾಟಕ ಸರ್ಕಾರದ ಸಚಿವಾಲಯ ಉಪಹಾರ ಮಂದಿರದಲ್ಲಿ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ 1994-96ರ ಅವಧಿಯಲ್ಲಿ ಕಾಫೀ, ಟೀ ಮತ್ತು ತಿಂಡಿ ಪದಾರ್ಥಗಳ ಮುಂಗಡ ಪುಸ್ತಕ ಬಾಬ್ತು ರೂ.3.29 ಲಕ್ಷ ಹಣವನ್ನು ಉಪಹಾರ ಮಂದಿರದ ಲೆಕ್ಕಕ್ಕೆ ಜಮಾ ಮಾಡದೆ ದುರುಪಯೋಗಪಡಿಸಿಕೊಂಡಿರುವ ಆರೋಪದ ಮೇಲೆ ತನಿಖೆ ನಡೆಸಲು ಒಂದು ಉಪ ಸಮಿತಿಯನ್ನು ನೇಮಿಸಲಾಗಿತ್ತು. ಸದರಿ ಉಪ ಸಮಿತಿಯು ತನಿಖೆ ಕೈಗೊಂಡು ರೂಪಾಯಿ 3.29 ಲಕ್ಷ ನಷ್ಟವಾಗಿರುವುದೆಂದು ಮೇಲೆ (1)ರಲ್ಲಿ ಓದಲಾದ ದಿನಾಂಕ:8.10.96ರ ವರದಿಯನ್ನು ಸಲ್ಲಿಸಿತ್ತು. ತದನಂತರ ಸರ್ಕಾರದ ನಿರ್ದೇಶನದಂತೆ ರಾಜ್ಯ ಲೆಕ್ಕಪತ್ರ ಇಲಾಖೆಯು ತನಿಖೆ ನಡೆಸಿ ರೂಪಾಯಿ 3,15,800 ನಷ್ಟ ಉಂಟಾಗಿರುವ ಬಗ್ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 25.5.98ರ ವರದಿಯಲ್ಲಿ ದೃಢೀಕರಿಸಿರುತ್ತದೆ. ಈ ನಷ್ಟಕ್ಕೆ ಶ್ರೀ ಬಿ.ಕೆ. ಶ್ರೀನಿವಾಸರಾವ್, ವ್ಯವಸ್ಥಾಪಕರು ಇವರೇ ಜವಾಬ್ದಾರರಾಗಿರುತ್ತಾರೆಂಬ ಕಾರಣದ ಮೇಲೆ ಹಾಗೂ ಇವರು ಆ ಹುದ್ದೆಯಿಂದ ವರ್ಗಾವಣೆಯಾಗಿದ್ದರೂ ಸಹ ಅವರ ಉತ್ತರಾಧಿಕಾರಿಯಾಗಿ ಸ್ಥಳನಿಯುಕ್ತಗೊಂಡ ಶ್ರೀ ಪಾಪಯ್ಯರಾಜುರವರಿಗೆ ಕಾರ್ಯಭಾರವನ್ನು ವಹಿಸಿಕೊಟ್ಟಿಲ್ಲವೆಂಬ ಆರೋಪದ ಮೇಲೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಿ, ನಿವೃತ್ತ ನ್ಯಾಯಾಧೀಶರಾದ ಪ್ರೊಫೆಸರ್ ಇಂದುಧರ್‌ರವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ (3) ರಲ್ಲಿ ಓದಲಾದ ದಿನಾಂಕ: 31.12.2001 ಸರ್ಕಾರದ ಆದೇಶದಲ್ಲಿ ನೇಮಿಸಲಾಗಿತ್ತು. ಅದರಂತೆ ವಿಚಾರಣೆಯನ್ನು ಕೈಗೊಂಡ ವಿಚಾರಣಾಧಿಕಾರಿಗಳು ಮೇಲೆ (4)ರಲ್ಲಿ ಓದಲಾದ ದಿನಾಂಕ:15.9.2003 ರಂದು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ವಿಚಾರಣಾ ವರದಿಯ ಪ್ರಕಾರ ಅಪಾದಿತ ಅಧಿಕಾರಿಯವರೇ ರೂ.3.29 ಲಕ್ಷ ಅವ್ಯವಹಾರಕ್ಕೆ ಜವಾಬ್ದಾರರಾಗಿರುತ್ತಾರೆಂದು, ಇವರ ಮೇಲೆ ಹೊರಿಸಲಾದ ಆಪಾದನೆಗಳು ರುಜುವಾತಾಗಿದೆಯೆಂದು ಸ್ಪಷ್ಟಪಡಿಸಿರುತ್ತಾರೆ.

ಮೇಲ್ಕಂಡ ವಿಚಾರಣಾ ವರದಿಯ ಬಗ್ಗೆ ಹೇಳಿಕೆಯನ್ನು ನೀಡಲು ಆಪಾದಿತ ಅಧಿಕಾರಿಗೆ ಸರ್ಕಾರದ ಮೇಲೆ (5)ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸ್ ದಿನಾಂಕ: 7.10.2003ರ ಮೂಲಕ ಅವಕಾಶವನ್ನು ನೀಡಲಾಗಿತ್ತು. ಅದರಂತೆ ಆಪಾದಿತ ಅಧಿಕಾರಿಯು ಮೇಲೆ (6)ರಲ್ಲಿ ಓದಲಾದ ಅವರ ಪತ್ರ ದಿನಾಂಕ:3.11.2003ರಲ್ಲಿ ಹೇಳಿಕೆಯನ್ನು ನೀಡುತ್ತಾ ಅವರ ಮೇಲಿನ ಆಪಾದನೆಗಳು ಸತ್ಯಕ್ಕೆ ದೂರವಾಗಿವೆಯೆಂದು, ಉಪಹಾರ ಮಂದಿರದ ಎಲ್ಲಾ ಆಗುಹೋಗುಗಳ ಬಗ್ಗೆ ಅವರೇ ಜವಾಬ್ದಾರಿ ಎಂದು ವಿಚಾರಣಾಧಿಕಾರಿಗಳ ಮುಂದೆ ಒಪ್ಪಿಕೊಂಡಿರುವುದರಿಂದ ಅವರ ಮೇಲಿನ ಆರೋಪವು ದೃಢಪಟ್ಟಿದೆಯೆಂದು ವರದಿ ನೀಡಿರುತ್ತಾರೆಂದು ಇದು ಸರಿಯಲ್ಲವೆಂದು, ತಮ್ಮನ್ನು ಆಪಾದನೆಗಳಿಂದ ಮುಕ್ತ ಮಾಡಬೇಕೆಂದು ಮನವಿ ಮಾಡಿರುತ್ತಾರೆ.

ಆಪಾದಿತರ ವಿವರಣೆಯನ್ನು ವಿಚಾರಣಾ ವರದಿ ಮತ್ತು ತತ್ಸಂಬಂಧ ದಾಖಲಾತಿಗಳೊಂದಿಗೆ ಹಾಗೂ ಸಾಕ್ಷಿಗಳ ಹೇಳಿಕೆಗಳ ಆಧಾರದ ಮೇಲೆ ಪರಿಶೀಲಿಸಲಾಗಿ ಆಪಾದಿತರು ಬಡ್ತಿ ಹೊಂದಿ ಬೇರೆ ಹುದ್ದೆಗೆ ನೇಮಕಗೊಂಡಿದ್ದರೂ ಸಹ ಮತ್ತು ಅವರ ಸ್ಥಾನಕ್ಕೆ ಶ್ರೀ ಪಾಪಯ್ಯರಾಜು ಎಂಬುವವರನ್ನು 19.7.96ರಂದು ನೇಮಿಸಲಾಗಿದ್ದರೂ ಸಹ ಅವರಿಗೆ ಪ್ರಭಾರವನ್ನು ವಹಿಸಿಕೊಡದೇ ಇರುವುದರಿಂದ ನೂತನವಾಗಿ ನೇಮಕಗೊಂಡ ವ್ಯವಸ್ಥಾಪಕರು ತಾವೇ ಕಾರ್ಯಭಾರವನ್ನು ವಹಿಸಿಕೊಂಡಿರುವುದು ತಿಳಿದು ಬರುತ್ತದೆ. ಆದರೆ ಆಪಾದಿತರು ಪ್ರಭಾರ ವರ್ಗಾವಣೆ ಪ್ರಮಾಣ ಪತ್ರಕ್ಕೆ ಸಹಿ ಮಾಡಿ ಕೊಟ್ಟಿರುವುದಾಗಿ ತಿಳಿಸಿರುತ್ತಾರೆ. ಅವರು ವಿವರವಾದ ಕಾರ್ಯಭಾರವನ್ನು ಪಡೆದಿಲ್ಲವಾದ್ದರಿಂದ ಶ್ರೀ ಪಾಪಯ್ಯರಾಜು ರವರಿಗೂ ಸಹ ವಿವರವಾದ ಕಾರ್ಯಭಾರವನ್ನು ವಹಿಸಿಕೊಡಲಿಲ್ಲವೆಂದು ಆಪಾದಿತ ಅಧಿಕಾರಿಯು ವಿಚಾರಣೆಯಲ್ಲಿ ತಿಳಿಸಿರುತ್ತಾರೆ. ಹಾಗೂ ಉಪಹಾರ ಮಂದಿರದ ಸಮಿತಿಯ ಕಾರ್ಯದರ್ಶಿಯ ಸಾಕ್ಷಿ ಹೇಳಿಕೆಯಲ್ಲೂ ಸಹ ಈ ಅಂಶವು ದೃಢಪಡುತ್ತದೆ. ಉಪಹಾರ ಮಂದಿರದ ವ್ಯವಸ್ಥಾಪಕ ಸಮಿತಿಯು ಈ ಬಗ್ಗೆ ಆಪಾದಿತರಿಗೆ ನೋಟೀಸ್ ಸಹ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಇವರು ನೂತನವಾಗಿ ನೇಮಕಗೊಂಡ ವ್ಯವಸ್ಥಾಪಕರಿಗೆ ಪ್ರಭಾರವನ್ನು ಸಂಪೂರ್ಣವಾಗಿ ವಹಿಸಿಕೊಟ್ಟಿಲ್ಲದಿರುವುದು ದೃಢಪಡುತ್ತದೆ. ಆದ್ದರಿಂದ ವಿಚಾರಣಾಧಿಕಾರಿಯ ವರದಿಯಂತೆ ಈ ಆಪಾದನೆಯು ರುಜುವಾತುಗೊಂಡಂತೆ ಆಗುತ್ತದೆ.

ಎರಡನೇ ಆಪಾದನೆಯ ಕುರಿತು ಉಪಹಾರ ಮಂದಿರದ ಮುಂಗಡ ಪುಸ್ತಕಗಳಲ್ಲಿ 1.10.94 ರಿಂದ 26.7.96ರವರೆಗೆ ಮುಂಗಡ ಪುಸ್ತಕಗಳ ಪರಿಶೀಲನೆ ಮಾಡಿದ್ದು ಅದರಂತೆ ರೂ.3.29 ಲಕ್ಷ ಉಪಹಾರ ಮಂದಿರದ ಲೆಕ್ಕಕ್ಕೆ ಜಮಾ ಆಗದೆ ಇರುವುದು ಸಹ ದೃಢಪಡುತ್ತದೆ. ದಿನವಹಿ ಮಾರಾಟವಾದ ಟಿಕೆಟ್‌ಗಳ ಬಗ್ಗೆ ನಮೂದು ಮಾಡಿ ಆಪಾದಿತರು ಸಹಿ ಮಾಡಿರುತ್ತಾರೆ. ಆದರೆ ಕಛೇರಿ ಸಿಬ್ಬಂದಿಯವರು ಲೆಕ್ಕವನ್ನು ಸರಿಯಾಗಿ ಇಡುತ್ತಿರಲಿಲ್ಲ. ಉಪಹಾರ ಮಂದಿರದ ಎಲ್ಲಾ ವ್ಯವಸ್ಥೆಗಳ ಬಗ್ಗೆ ಅವರೇ ಗಮನಹರಿಸಬೇಕಾಗಿತ್ತೆಂದು ಮುಂಗಡ ಪುಸ್ತಕಗಳನ್ನು ಸ್ವೀಕರಿಸಿದ್ದಕ್ಕೆ ಸಹಿ ಇದ್ದ ಮಾತ್ರಕ್ಕೆ ವ್ಯವಸ್ಥಾಪಕರೇ ಇದಕ್ಕೆ ಹೊಣೆಯಲ್ಲವೆಂಬ ಆಪಾದಿತರ ನಿಲುವನ್ನು ಒಪ್ಪಲು ಸಾಧ್ಯವಿಲ್ಲ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ಪ್ರತಿದಿನ ಮಾರಾಟವಾದ ಮುಂಗಡ ಪುಸ್ತಕಗಳ ಮೌಲ್ಯವನ್ನು ಪರಿಶೀಲಿಸಿ ಅದನ್ನು ದಿನಂಪ್ರತಿ ಉಪಹಾರ ಮಂದಿರದ ಲೆಕ್ಕಕ್ಕೆ ಆಪಾದಿತರು ಜಮಾ ಮಾಡದೇ ಇರುವುದು ಸ್ಪಷ್ಟವಾಗಿ ಖಚಿತಪಡುತ್ತದೆ. ಆದ್ದರಿಂದ ವಿಚಾರಣಾಧಿಕಾರಿಯ ವರದಿಯಂತೆ ಇವರ ಮೇಲಿನ 2ನೇ ಆಪಾದನೆಯು ಸಹ ರುಜುವಾತುಗೊಂಡಿದೆ.

ಮೇಲ್ಕಂಡ ವಿವರಗಳನ್ನು ಪರಿಶೀಲಿಸಿ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಅವರ ವಿರುದ್ಧ ಉದ್ದೇಶಿಸಿರುವ ದಂಡನೆಗೆ ಲೋಕ ಸೇವಾ ಆಯೋಗದ ಸಹಮತಿಯನ್ನು ಉಲ್ಲೇಖ (7)ರ ಪತ್ರದಲ್ಲಿ ಪಡೆಯಲಾಗಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 104 ಎಸ್‌ಇಎನ್ 96, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಬಿ.ಕೆ. ಶ್ರೀನಿವಾಸರಾವ್, ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿದ ಅಧೀನ ಕಾರ್ಯದರ್ಶಿ ಇವರಿಗೆ ಕೆ.ಸಿ.ಎಸ್ (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 8(vi) ರ ಅನ್ವಯ ಇವರನ್ನು ತಕ್ಷಣದಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಹಾಗೂ ಇವರ ನಿವೃತ್ತಿ ಸೌಲಭ್ಯಗಳಿಂದ ಸರ್ಕಾರಕ್ಕೆ ಉಂಟಾದ ನಷ್ಟ ರೂ.3.29 ಲಕ್ಷವನ್ನು (ಮೂರು ಲಕ್ಷದ ಇಪ್ಪತ್ತೊಂಬತ್ತು ಸಾವಿರ ಮಾತ್ರ) ವಸೂಲಿ ಮಾಡಲು ಸಹ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 35

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು 3).

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ತಿದ್ದುಪಡಿ ಸಂ:ಮಮಇ 460 ಎಸ್‌ಜೆಡಿ 2003, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2004**

ಸರ್ಕಾರಿ ಆದೇಶ ಸಂ: ಮಮಇ 460 ಎಸ್‌ಜೆಡಿ 2004, ದಿ: 26.10.2004 ರಲ್ಲಿ ಹೊರಡಿಸಿರುವ ಆದೇಶದ ವಿಷಯ ಶೀರ್ಷಿಕೆ ಎರಡನೇ ಸಾಲಿನಲ್ಲಿ, "ಹಿರಿಯ ಅಂಗವಿಕಲರ ನೀತಿ" ಎಂಬ ಪದಗಳ ಬದಲಾಗಿ "ಹಿರಿಯ ನಾಗರೀಕರ ನೀತಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 37

**ಪ್ರ.ದ. ಸಿದ್ಧಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಮೈಸೂರು ವೈದ್ಯಕೀಯ ಕಾಲೇಜಿನ ಸುಪರ್ದಿಯಲ್ಲಿರುವ ಜೀವನ ರಾಯನ್‌ಕಟ್ಟೆ ಮೈದಾನವನ್ನು ವೈದ್ಯಕೀಯ ಕಾಲೇಜಿನ ಆಸ್ತಿಯೆಂದು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆಕುಕ 199 ಎಂಎಸ್‌ಎಫ್ 2004, ದಿನಾಂಕ: 19.11.2004.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 19.11.2004ರ ಆದೇಶದಲ್ಲಿ ಮೈಸೂರಿನ ದೇವರಾಜ ಮೊಹಲ್ಲಾ ಆಸ್ತಿ ಸಂಖ್ಯೆ: 5 ವಿಸ್ತೀರ್ಣ 54941 ಚದರ ಮೀಟರ್ ಉಳ್ಳ ಮೈಸೂರಿನ ಜೆ.ಕೆ.ಆಟದ ಮೈದಾನವನ್ನು ಮೈಸೂರು ವೈದ್ಯಕೀಯ ಕಾಲೇಜಿನ ಆಸ್ತಿಯೆಂದು ಮೈಸೂರು ಮಹಾನಗರ ಪಾಲಿಕೆಯಲ್ಲಿ ಹಾಗೂ ನಗರ ಭೂಮಾಪನ ಕಛೇರಿಯಲ್ಲಿ ದಾಖಲಿಸಲು ಆದೇಶಿಸಲಾಗಿದೆ. ಸರ್ಕಾರದ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)ರವರು ಮೇಲೆ ಓದಲಾದ ಸರ್ಕಾರಿ ಆದೇಶವನ್ನು ಜಾರಿಗೊಳಿಸಲು ನಗರಾಭಿವೃದ್ಧಿ ಇಲಾಖೆಯಿಂದ ಸೂಕ್ತ ಆದೇಶ ಹೊರಡಿಸಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 113 ಎಸಿಎಂ 2004, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಮೈಸೂರು ವೈದ್ಯಕೀಯ ಕಾಲೇಜಿಗೆ ಈಗಾಗಲೇ ಹಸ್ತಾಂತರವಾಗಿರುವ ಮೈಸೂರಿನ ದೇವರಾಜ ಮೊಹಲ್ಲಾ ಆಸ್ತಿ ಸಂಖ್ಯೆ:5 ವಿಸ್ತೀರ್ಣ 54941 ಚದರ ಮೀಟರ್ ಉಳ್ಳ ಜಿ.ಕೆ. ಆಟದ ಮೈದಾನವನ್ನು ಮೈಸೂರು ವೈದ್ಯಕೀಯ ಕಾಲೇಜಿನ ಆಸ್ತಿಯೆಂದು ಮೈಸೂರು ಮಹಾನಗರ ಪಾಲಿಕೆ ಹಾಗೂ ನಗರ ಭೂ ಮಾಪನ ಕಛೇರಿ ದಾಖಲಾತಿಗಳಲ್ಲಿ ದಾಖಲಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 38

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**INFORMATION TECHNOLOGY, BIOTECHNOLOGY & SCIENCE & TECHNOLOGY SECRETARIAT**

**Sub:** Approval of the Project proposal of M/s Comat Technologies Private Limited for establishment of BPO (ITES) project at Kadubeesanahalli, Bangalore South Tq.

**Read:** Proceedings of the 93rd High Level Committee [HLC] Meeting held on 24-1-2004.

**Preamble:-**

M/s Comat Technologies Private Limited, is currently having a total of 30,000 sft facility at Bangalore and Mysore respectively and has employed over 250 IT professionals. It has been providing software development, ITES Services in the area of e-business solutions, content management, e-Governance, BPO & Electronics Product Data Management Solutions. The Company is also involved in development of the well-known "Bhoomi" software platform for the Revenue Department, Government of Karnataka as a part of e-Governance initiatives.

The Company intends to get into the BPO area in a big way to provide services in the area of customer interaction, finance and accounting services, data entry and allied areas. In the next five years, the company projects a growth in business to an annual revenue of Rs.250 crores and the full time employees strength by 2006-07 is expected to go up to 7680 persons in phases.

The land identified earlier were overlapping with the land approved earlier in the 91st HLC meeting held on 21-4-2003. The company in its letter dated 16.9.2003 has stated that it has identified alternative lands of 11 acres 35 guntas for its project in Sy. No.15 & 17/1 (part measuring about 35 guntas on western side of road, adjacent to Sy. No. 15) of Kadubeesanahalli village, Varthur Hobli, Bangalore South Tq.

In the proposal submitted for the 93rd High Level Committee Meeting held on 24/1/2004, the Company had requested various Infrastructure facilities and the incentives and concessions from the Government. The HLC after detailed discussion of the project proposal of the said Company has recommended certain infrastructure facilities, incentives and concessions to the project, as detailed in the proceedings cited at reference above.

Government have examined the recommendations of the HLC Hence the following order.

**Government Order No. ITD 16 PRM 2004, Bangalore, Dated: 21st December 2004**

In the circumstances explained in the Preamble, Government are pleased to accord approval to **M/s Comat Technologies Private Limited** for establishment of BPO (ITES) project at Kadubeesanahalli, Varthur Hobli, Bangalore South Tq. with the following facilities and incentives.

**INFRASTRUCTURE FACILITIES:**

**LAND:**

KIADB to acquire and allot 11 acres 35 guntas of land as a "Single Unit Complex" at Sy No:15 & 17/1(part measuring about 35 guntas on western side of road, adjacent to Sy.No.15) of Kabubeesanahalli, Varthur Hobli, Bangalore South Tq.

**WATER:** BWSSB to consider supply of 2 Lakh ltrs. of Water per day.

The company is advised to adopt the elements of the National Water Policy including water harvesting, recharging of ground water, complete recycling of water etc. The Company is also advised to indicate its net requirement of water after taking into account the quantum of recycled water. The Company should also clearly specify to BWSSB, its requirements of treated water and fresh water.

**POWER:**

BESCOM to consider supply of 3000KVA power.

**INCENTIVES & CONCESSIONS:**

1. Incentives and Concessions as per the Millennium BPO Policy shall be extended to the Company.

The Company will approach Karnataka State Pollution Control Board and Department of Ecology and Environment to obtain clearance as per the provisions of the relevant Act and Rules at the earliest.

The Company shall porovide employment to local persons as per policy of the Government.

By Order and in the name of the Governor of Karnataka,

**B.V. KUMARASWAMY**

P.R. 39 Under Secretary to Government,

Department of Information Technology, Biotechnology & Science & Technology.

**Government Order No. ITD 15 ADM 2001, Bangalore, Dated: 3rd January 2005**

**Sub:** Constitution of Departmental Adhoc Committee for the Department of Information Technology, Biotechnology and Science and Technology-Orders reg.

**Read:** 1. O.M. No. FD 14 BPA 2003 dated 05.12.03.

2. G.O. No. FD 3 CAM 2004 dated 19.07.04.

In pursuance of the O.M. dated 05.12.03 and the G.O. dated 19.07.04 read at (1) and (2) above, the following "Departmental Adhoc Committee" for the Department of IT, BT and Science and Technology is hereby constituted.

| | | |
|---|---|---|
| 1) | Principal Secretary / Secretary to Government<br>Dept of IT, BT & Science and Technology | Chairman |
| 2) | Director, Dept of IT & BT | Member |
| 3) | Controller (Accounts Management) and Ex-Officio Secretary to Government, FD | Member |
| 4) | A nominee of the Accountant General in the rank of a senior DAG | Member |

The above Committee shall conduct meetings at least once in a quarter to discuss the issues raised in the draft audit reports of the Accountant General and ensure compliance within the stipulated time to the Principal Accountant General / Accountant General. The meetings of the Departmental Adhoc Committee shall be held before the meeting of the Apex Audit Committee, which meets once in a year during August and September to review and discuss issues raised in the draft audit report pertaining to the concerned administrative department for which replies are ready.

By Order and in the name of the Governor of Karnataka,

**B.V. KUMARASWAMY**

P.R. 40 Under Secretary to Government,

Department of Information Technology, Biotechnology & Science & Technology.

**ಶಿಕ್ಷಣ ಸಚಿವಾಲಯ**

**ತಿದ್ದೋಲೆ ಸಂಖ್ಯೆ: ಇಡಿ 99 ಡಿಪಿಐ 2004, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2004**

ದಿನಾಂಕ:16.12.2004ರ ಸರ್ಕಾರದ ಅಧಿಸೂಚನೆ ಸಂಖ್ಯೆ.ಇಡಿ 99 ಡಿಪಿಐ 2004ರಲ್ಲಿನ ಕ್ರಮಸಂಖ್ಯೆ.26ರಲ್ಲಿರುವ ಶ್ರೀಮತಿ ಹೆಚ್.ಎಂ. ಪ್ರೇಮಾ (ಶಿಕ್ಷಣಾಧಿಕಾರಿ, ಎಂ.ಎಂ.ಎಸ್., ಹಾಸನ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವ) ಇವರನ್ನು ಹೊನ್ನಾಳಿ ಕ್ಷೇತ್ರ ಶಿಕ್ಷಣಾಧಿಕಾರಿ ಹುದ್ದೆಗೆ ವರ್ಗಾಯಿಸಿ ಹೊರಡಿಸಿರುವ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 41 **ಎಂ. ಉಮೇಶ್**

ಸರ್ಕಾರದ ಅಪರ ಕಾರ್ಯದರ್ಶಿ-1, ಶಿಕ್ಷಣ ಇಲಾಖೆ.

**WOMEN AND CHILD DEVELOPMENT SECRETARIAT**

**Sub:** Appointment of Sri L. Krishnamurthy, as Commissioner for Persons With Disabilities fixation of the tenure of Office of the Commissioner - regarding.

**Read:** 1. Notification No. WCD.527.PHP.2001 dated 17.02.2004.

2. G.O.No.WCD.527.PHP.2001/dated/04-03-2004.

3. Representation of Sri L.Krishnamurthy, Commissioner for Persons with Disabilities, dated 2.08.2004.

**Preamble:-**

Sri L. Krishnamurthy has been appointed as Commissioner for Persons with Disabilities under section 60[1]of the Persons With Disabilities [Equal opportunities Protection of Rights and Full Participation] Act, 1995 vide Notification read at Sl.No.[1] above.

As per the provisions under section 60[3] of the above said Act, the terms and conditions of the Commissioner have been prescribed in Government Order read at Sl.No.[2] above. In the Orders and the Notification read at (1) and (2) above the term of the State Commissioner has been prescribed as three years from the date of entry to the Office or until further orders whichever is earlier.

In the letter read at (3) above, Sri L. Krishnamurthy has requested Government to fix the tenure of his Office for three years as done in the case of States like Rajasthan and Madhya Pradesh.

The request of the Commissioner has been examined by the Government and the following order is issued.

**Government Order No. WCD.256.PHP2004, Bangalore, Dated: 27th December 2004**

Since the State Commissioner for Person With Disabilities holds the post by statute, in order to ensure continuity in his work the tenure of his Office is prescribed as three years from the date of entry to the Office.

By Order and in the name of the Governor of Karnataka,
**R.M. CHANDRAMMA**
Under Secretary to Government,
Women and Child Development Department.

P.R. 42

**ಒಳಾಡಳಿತ ಸಚಿವಾಲಯ**

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಭರ್ತಿ ಮಾಡಲು ಆಯ್ಕೆ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಲಾ 222 ಪಿಪಿಇ 2000 ದಿನಾಂಕ:26.02.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಸಿಎ 7 ಎಆರ್‌ಬಿ 2004 ದಿನಾಂಕ:22.09.2004.
3. ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: ಲಾ 222 ಪಿಪಿಇ 2000 ದಿನಾಂಕ:30.11.2004.

**ಪ್ರಸ್ತಾವನೆ:**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಖಾಲಿಯಿರುವ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಭರ್ತಿ ಮಾಡಲು ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ:26.02.2002ರ ಸರ್ಕಾರಿ ಆದೇಶದಲ್ಲಿ ಈ ಕೆಳಕಂಡ ಸದಸ್ಯರನ್ನು ಒಳಗೊಂಡ ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು.

1) ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ. - ಅಧ್ಯಕ್ಷರು
2) ಸರ್ಕಾರದ ಕಾರ್ಯದರ್ಶಿಗಳು, (ಸೆರೆಮನೆ, ಅಪರಾಧಗಳು) ಮತ್ತು ಸಹಾಯಕ ಸೇವೆಗಳು ಗೃಹ ಮತ್ತು ಸಾರಿಗೆ ಇಲಾಖೆ. - ಸದಸ್ಯರು
3) ಸರ್ಕಾರದ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ. - ಸದಸ್ಯರು
4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು. - ಸದಸ್ಯರು
5) ಸರ್ಕಾರದ ಅಪರ ಕಾರ್ಯದರ್ಶಿಗಳು, ಕಾನೂನು ಇಲಾಖೆ (ವ್ಯಾಜ್ಯ-1) - ಸದಸ್ಯರು

ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ:22.09.2004ರ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರ (ವ್ಯವಹಾರಗಳ ಹಂಚಿಕೆ) ನಿಯಮಾವಳಿಗಳು 1977ಕ್ಕೆ ತಿದ್ದುಪಡಿಯನ್ನು ಹೊರಡಿಸಿ "ಅಭಿಯೋಗಗಳು ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶನಾಲಯಕ್ಕೆ ಸಂಬಂಧಿಸಿದ ವಿಷಯಗಳನ್ನು ಒಳಗೊಂಡಂತೆ ಅಪರಾಧಿಕ ಅಭಿಯೋಗಗಳ" ವಿಷಯವನ್ನು ಕಾನೂನು ಇಲಾಖೆಯಿಂದ ಒಳಾಡಳಿತ ಇಲಾಖೆಗೆ ವರ್ಗಾಯಿಸಲಾಗಿದೆ.

ಮೇಲೆ (3)ರಲ್ಲಿ ಓದಲಾಗಿರುವ ಕಾನೂನು ಇಲಾಖೆಯ ದಿನಾಂಕ:30.11.2004ರ ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: ಲಾ 222 ಪಿಪಿಇ 2000 ರಲ್ಲಿ ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ:22.09.2004ರ ಅಧಿಸೂಚನೆಯನ್ನು ಅನುಸರಿಸಿ ಆಯ್ಕೆ ಸಮಿತಿಯನ್ನು ಒಳಾಡಳಿತ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರನ್ನು ಅಧ್ಯಕ್ಷರನ್ನಾಗಿ ನೇಮಿಸಿ ಆಯ್ಕೆ ಸಮಿತಿಯನ್ನು ಪುನರ್ ರಚಿಸುವ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸದರಿ ಸಮಿತಿಯನ್ನು ಈ ಕೆಳಕಂಡಂತೆ ಮಾರ್ಪಡಿಸಿ ಪುನರ್ ರಚಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 67 ಪಿಪಿಇ 2004, ಬೆಂಗಳೂರು, ದಿನಾಂಕ: 4ನೇ ಜನವರಿ 2005**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳ ಆಯ್ಕೆ ಸಮಿತಿಯನ್ನು ಈ ಕೆಳಕಂಡಂತೆ ಮಾರ್ಪಡಿಸಿ ಪುನರ್ ರಚಿಸಲಾಗಿದೆ.

1) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ. - ಅಧ್ಯಕ್ಷರು

| | | | |
|---|---|---|---|
| 2) | ಸರ್ಕಾರದ ಕಾರ್ಯದರ್ಶಿಗಳು,<br>ಒಳಾಡಳಿತ ಇಲಾಖೆ. (ಸೆರೆಮನೆ, ಅಪರಾಧಗಳು ಮತ್ತು ಸಹಾಯಕ ಸೇವೆಗಳು) | - | ಸದಸ್ಯರು |
| 3) | ಸರ್ಕಾರದ ಕಾರ್ಯದರ್ಶಿಗಳು,<br>ಕಾನೂನು ಇಲಾಖೆ. | - | ಸದಸ್ಯರು |
| 4) | ಸರ್ಕಾರದ ಕಾರ್ಯದರ್ಶಿ,<br>ಸಮಾಜ ಕಲ್ಯಾಣ ಇಲಾಖೆ. | - | ಸದಸ್ಯರು |
| 5) | ನಿರ್ದೇಶಕರು,<br>ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ. | - | ಸದಸ್ಯರು |
| 6) | ಜಂಟಿ ನಿರ್ದೇಶಕರು (ಆಡಳಿತ)<br>ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ. | - | ಸದಸ್ಯ ಕಾರ್ಯದರ್ಶಿ |

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಭರ್ತಿ ಮಾಡಲು ರಚಿಸಿರುವ ಆಯ್ಕೆ ಸಮಿತಿಗೆ ಶ್ರೀ ಸದಾಶಿವಮೂರ್ತಿ, ಜಂಟಿ ಅಭಿಯೋಗ ನಿರ್ದೇಶಕರು (ಆಡಳಿತ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಇವರನ್ನು ಆಯ್ಕೆ ಸಮಿತಿಯ ಕಾರ್ಯದರ್ಶಿ ಆಗಿ ನಾಮ ನಿರ್ದೇಶಿಸಲಾಗಿದೆ.

ಸಭೆಯಲ್ಲಿ ಹಾಜರಿರಬೇಕಾದ ಸದಸ್ಯರ ಗಣಪೂರ್ತಿ ಸಂಖ್ಯೆ (ಕೋರಂ) 3 ಆಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 43

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

## ಸಹಕಾರ ಸಚಿವಾಲಯ

**ವಿಷಯ:** ರಾಜ್ಯದಲ್ಲಿನ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಅಧಿಸೂಚಿತ ಕೃಷಿ ಉತ್ಪನ್ನಗಳ ಖರೀದಿದಾರರಿಂದ ಪ್ರತಿ ಶತ 1.5ರಷ್ಟು ಮಾರುಕಟ್ಟೆ ಶುಲ್ಕವನ್ನು ವಸೂಲಿ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಇವರ ಪತ್ರ ಸಂಖ್ಯೆ: ಕೃಮಾಇ:103:ನಿಯವಿ:2002, ದಿ:18.11.2002

**ಪ್ರಸ್ತಾವನೆ:**

ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಅಧಿನಿಯಮ, 1966ರ ಕಲಂ 65ರನ್ವಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಅಧಿಸೂಚಿತ ಕೃಷಿ ಉತ್ಪನ್ನಗಳ ಖರೀದಿದಾರರಿಂದ ಮಾರುಕಟ್ಟೆ ಶುಲ್ಕವನ್ನು ವಸೂಲಿ ಮಾಡಲು ಅವಕಾಶವಿದೆ. ಪ್ರಾರಂಭದಲ್ಲಿ ಪ್ರತಿ ರೂ.100-00ಗಳಿಗೆ ರೂ.0-30ರಷ್ಟು ಮಾರುಕಟ್ಟೆ ಶುಲ್ಕವನ್ನು ವಿಧಿಸಲಾಗುತ್ತಿತ್ತು. ಅಧಿನಿಯಮ ಸಂಖ್ಯೆ: 20/1973ರನ್ವಯ ದಿನಾಂಕ:23.10.1973ರಿಂದ ಮಾರುಕಟ್ಟೆ ಶುಲ್ಕವನ್ನು ಶೇಕಡ 1ಕ್ಕೆ ಹೆಚ್ಚಿಸಿ ತಿದ್ದುಪಡಿ ಮಾಡಲಾಯಿತು. ಅದರಂತೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ತಮ್ಮ ಉಪನಿಯಮಗಳಿಗೆ ತಿದ್ದುಪಡಿ ಮಾಡಿ ಮಾರುಕಟ್ಟೆ ಶುಲ್ಕವನ್ನು ಗರಿಷ್ಠ ಶೇಕಡ 1ಕ್ಕೆ ಸೀಮಿತಗೊಳಿಸಿದವು. ತದನಂತರ, ದಿನಾಂಕ: 28.9.1978ರಿಂದ ಅನ್ವಯಿಸುವಂತೆ ಮಾರುಕಟ್ಟೆ ಶುಲ್ಕವನ್ನು ಶೇಕಡ 1 ರಿಂದ ಶೇಕಡ 2ಕ್ಕೆ ಹೆಚ್ಚಿಸಲಾಯಿತು. ಸದರಿ ಆದೇಶವನ್ನು ವ್ಯಾಪಾರಸ್ಥರು ಮಾನ್ಯ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ದಿನಾಂಕ: 25.01.1982ರ ತೀರ್ಪಿನನುಸಾರ ಮಾರುಕಟ್ಟೆ ಶುಲ್ಕವನ್ನು ಶೇಕಡ 1 ರಿಂದ ಶೇಕಡ 2ಕ್ಕೆ ಹೆಚ್ಚಿಸಲಾದ ಆದೇಶವನ್ನು ಎತ್ತಿಹಿಡಿಯಲಾಯಿತು. ತದನಂತರ, ಸರ್ಕಾರದ ಸೂಚನೆಯ ಮೇರೆಗೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಮಾರುಕಟ್ಟೆ ಶುಲ್ಕವನ್ನು ಶೇಕಡ 1ಕ್ಕೆ ಸೀಮಿತಗೊಳಿಸಿದವು.

ಕೃಷಿಕರ ಹಿತದೃಷ್ಟಿಯಿಂದ ಮಾರುಕಟ್ಟೆಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳ ನಿರ್ಮಾಣ ಮತ್ತು ಸುಧಾರಣೆಗಳಿಗಾಗಿ ಸಂಪನ್ಮೂಲಗಳನ್ನು ಕ್ರೋಢೀಕರಣಗೊಳಿಸುವುದು ಅವಶ್ಯಕವಾಗಿರುವ ಕಾರಣ ಮಾರುಕಟ್ಟೆ ಶುಲ್ಕವನ್ನು ದಿನಾಂಕ: 1.5.1996ರಿಂದ ಅನ್ವಯಿಸುವಂತೆ ಶೇಕಡ 2ಕ್ಕೆ ಹೆಚ್ಚಿಸಲು ನಿರ್ಧರಿಸಲಾಯಿತು. ಆದಾಗ್ಯೂ ಮಾರುಕಟ್ಟೆ ಶುಲ್ಕವನ್ನು ಶೇಕಡ 1ರಂತೆ ಮಾತ್ರ ವಸೂಲು ಮಾಡಲು ಎಲ್ಲಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ರವರು ಸೂಚಿಸಿದ್ದರು.

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 30.9.2002ರ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ನಿರ್ದೇಶಕರ ಪತ್ರ ಮತ್ತು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 18.11.2002ರ ಕೃಷಿ ಮಾರಾಟ ಇಲಾಖೆಯ ನಿರ್ದೇಶಕರ ಪತ್ರದಲ್ಲಿನ ಅಭಿಪ್ರಾಯಗಳನ್ನು ಸಮಗ್ರವಾಗಿ ಸರ್ಕಾರವು ಪರಿಶೀಲಿಸಿದೆ. ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ನಿರ್ದೇಶಕರು ತಮ್ಮ ಪತ್ರದಲ್ಲಿ ಆಗ್ರೋ ಆಹಾರ ಸಂಸ್ಕರಣ ಘಟಕಗಳು ಸಂಸ್ಕರಿಸಿದ ಹುಟ್ಟುವಳಿಗೆ ವಾರ್ಷಿಕ ಕನಿಷ್ಠ ರೂ. 8.00 ಕೋಟಿಗಳಷ್ಟು ಮಾರುಕಟ್ಟೆ ಶುಲ್ಕವನ್ನು ಪಾವತಿಸುತ್ತಿರುವುದಾಗಿ ತಿಳಿಸಿದ್ದು, ಈ ಸಂಬಂಧ ಮಾರುಕಟ್ಟೆ ಸಮಿತಿಗಳ ಸಂಸ್ಕರಿಸಿದ ಹುಟ್ಟುವಳಿಗೆ ಮಾರುಕಟ್ಟೆ ಶುಲ್ಕ ವಿಧಿಸುವುದರಿಂದ ವಿನಾಯಿತಿ ನೀಡಬೇಕೆಂದು ಕೋರಿರುತ್ತಾರೆ.

ಅತಿ ಮುಖ್ಯವಾಗಿ ಅಕ್ಕಿ, ಮೆಕ್ಕೆಜೋಳ, ಗೋಧಿ, ಬೇಳೆಕಾಳುಗಳು ಹಾಗೂ ಹಣ್ಣು ಮತ್ತು ತರಕಾರಿಗಳನ್ನು ಗುರುತಿಸಿದ್ದು, ಇವುಗಳನ್ನು ಸಂಸ್ಕರಿಸಿದ ಹುಟ್ಟುವಳಿಗಳ ಮಾರಾಟದಿಂದ ಮಾರುಕಟ್ಟೆ ಸಮಿತಿಗಳಿಗೆ ಸುಮಾರು ರೂ. 10.00ರಿಂದ 15.00 ಕೋಟಿಗಳು ಮಾರುಕಟ್ಟೆ ಶುಲ್ಕ ಸಂದಾಯವಾಗುತ್ತದೆ. ಸದರಿ ಸಂಸ್ಥೆಗಳಿಗೆ ಮಾರುಕಟ್ಟೆ ಶುಲ್ಕ ವಿನಾಯಿತಿ ನೀಡಿದಲ್ಲಿ ಮಾರುಕಟ್ಟೆ ಸಮಿತಿಗಳಿಗೆ ಆರ್ಥಿಕ ನಷ್ಟ ಉಂಟಾಗುತ್ತದೆ. ಇದರಿಂದ ಮಾರುಕಟ್ಟೆ ಪ್ರಾಂಗಣಗಳಲ್ಲಿ ರೈತರಿಗೆ ಹಾಗೂ ವರ್ತಕರ ವರ್ಗದವರಿಗೆ ಮೂಲಭೂತ ಸೌಕರ್ಯ/ಸೌಲಭ್ಯಗಳನ್ನು ಕಲ್ಪಿಸಲು ಸಾಧ್ಯವಾಗದೇ ಪ್ರಾಂಗಣದ ಅಭಿವೃದ್ಧಿ ಕಾರ್ಯಗಳು ಕುಂಠಿತಗೊಳ್ಳುವ ಸಾಧ್ಯತೆ ಹೆಚ್ಚಾಗಿರುತ್ತದೆ. ಅಲ್ಲದೆ ಕೃಷಿ ಹುಟ್ಟುವಳಿಗಳು ಪ್ರಾಂಗಣಕ್ಕೆ ಆವಕವಾಗದೇ ಪ್ರಾಂಗಣದ ಹೊರಗೆ ವ್ಯವಹಾರ ಸಂಭವವಿರುತ್ತದೆ. ಆದುದರಿಂದ, ಆಗ್ರೋ ಆಹಾರ ಸಂಸ್ಕರಣ ಘಟಕಗಳಿಗೆ ಮಾರುಕಟ್ಟೆ ಶುಲ್ಕ ವಿನಾಯಿತಿ ನೀಡುವುದು ಸಮಂಜಸವಲ್ಲ ಎಂದು ಅಭಿಪ್ರಾಯಪಡಲಾಗಿದೆ.

ಅದಲ್ಲದೇ ಸನ್ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 10.6.2002ರಂದು ಜರುಗಿದ ಸಮಾಲೋಚನಾ ಸಭೆಯಲ್ಲಿ, ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಖರೀದಿಸುವ ಕೃಷಿ ಉತ್ಪನ್ನಗಳಿಗೆ ಕೂಡಲೇ ರೈತರಿಗೆ ಹಣ ಪಾವತಿ ಮಾಡಲು ಅನುಕೂಲವಾಗುವಂತೆ ಸ್ಥಾಪಿಸಲಾಗಿರುವ ಆವರ್ತ ನಿಧಿಯನ್ನು 100.00 ಕೋಟಿ ರೂಪಾಯಿಗಳಿಂದ 400.00ಕೋಟಿ ರೂಪಾಯಿಗಳಿಗೆ, ಸಾರ್ವಜನಿಕ ಹಿತದೃಷ್ಟಿಯಿಂದ, ಹೆಚ್ಚಿಸುವುದು ಅತ್ಯಂತ ಸೂಕ್ತವೆಂದು ನಿರ್ಧರಿಸಲಾಗಿದ್ದು, ಅದರಂತೆ ಮಾರುಕಟ್ಟೆ ಶುಲ್ಕವನ್ನು ಶೇಕಡ 1ರಿಂದ ಶೇಕಡಾ 2ಕ್ಕೆ ಹೆಚ್ಚಿಸುವ ಅಭಿಪ್ರಾಯ ರೂಪಿತವಾಗಿದ್ದಿತು.

ಮಾರುಕಟ್ಟೆ ಶುಲ್ಕವನ್ನು ಶೇಕಡ 1 ರಿಂದ 2ಕ್ಕೆ ಹೆಚ್ಚಿಸಿದಲ್ಲಿ ಮಾರುಕಟ್ಟೆ ಸಮಿತಿಗಳ ಆದಾಯದಲ್ಲಿ ಗಣನೀಯ ಹೆಚ್ಚಳ ಉಂಟಾಗಿ ಆವರ್ತ ನಿಧಿಗೆ ಹೆಚ್ಚಿನ ವಂತಿಗೆಯನ್ನು ನೀಡಲು ಮತ್ತು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಸಾಧ್ಯವಾಗುತ್ತದೆ. ಈ ಬಗ್ಗೆ ಸನ್ಮಾನ್ಯ ಮುಖ್ಯಮಂತ್ರಿಗಳವರು ಮಾರ್ಚ್ 2003ರಲ್ಲಿ ನೀಡಿದ ಆಯವ್ಯಯ ಭಾಷಣದಲ್ಲಿ ಈ ಕೆಳಕಂಡಂತೆ ಹೇಳಿರುತ್ತಾರೆ:-

ಆವರ್ತ ನಿಧಿಗೆ ಸ್ವಲ್ಪ ಭಾಗವನ್ನು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಮೂಲಕ ಕೊಡುಗೆಯಾಗಿ ಪಡೆಯಲಾಗುವುದು. ಆವರ್ತ ನಿಧಿಗೆ ಸಂಪನ್ಮೂಲ ಒಗ್ಗೂಡಿಸಲು ಮಾರುಕಟ್ಟೆ ಶುಲ್ಕವನ್ನು ಶೇಕಡ 1 ರಿಂದ ಶೇಕಡ 1.5ಕ್ಕೆ ಏರಿಸಲಾಗುವುದು. ಇದರಿಂದಾಗಿ ಆವರ್ತ ನಿಧಿಯ ಮೊತ್ತವು 200 ಕೋಟಿ ರೂ.ಗಳಿಗೆ ಏರಲಿದ್ದು ಮಾರುಕಟ್ಟೆ ಬೆಂಬಲ ಕಾರ್ಯಾಚರಣೆಯ ವಹಿವಾಟನ್ನು 500 ಕೋಟಿ ರೂ.ಗಳವರೆಗೆ ನಿರ್ವಹಿಸಬಹುದಾಗಿದೆ.

ಮೇಲ್ಕಂಡ ಸಂದರ್ಭದಲ್ಲಿ ಈ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿದ ಸರ್ಕಾರವು ಕೃಷಿ ಮಾರುಕಟ್ಟೆ ಶುಲ್ಕವನ್ನು ಶೇಕಡ 1 ರಿಂದ ಶೇಕಡ 1.5ಕ್ಕೆ ಹೆಚ್ಚಿಸುವುದು ಅತ್ಯಂತ ಸೂಕ್ತವೆಂದು ಪರಿಗಣಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 277 ಎಂಆರ್ಇ 2002, (ಭಾಗ), ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಆವರ್ತನಿಧಿಗೆ ಹೆಚ್ಚಿನ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಅನುಕೂಲವಾಗುವಂತೆ, ಸಾರ್ವಜನಿಕ ಹಿತದೃಷ್ಟಿಯಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಕಾಯ್ದೆ, 1966ರ ಕಲಂ 65ರ ಉಪಕಲಂ (2)ರನ್ವಯ ಕೃಷಿ ಮಾರುಕಟ್ಟೆ ಶುಲ್ಕವನ್ನು, ತಕ್ಷಣದಿಂದ ಅನ್ವಯಿಸುವಂತೆ ಮತ್ತು ಮುಂದಿನ ಆದೇಶದವರೆಗೆ ಶೇಕಡ 1.5ರಷ್ಟು ವಸೂಲಿ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ:661:ವೆಚ್ಚ-2: 2003, ದಿನಾಂಕ: 23.6.2003ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 44

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ಶಿಕ್ಷಣ ಸಚಿವಾಲಯ**

**ಅಧಿಕೃತ ಜ್ಞಾಪನಾ ಸಂಖ್ಯೆ: ಇಡಿ 83 ಡಿಜಿಓ 2001 (i), ಬೆಂಗಳೂರು, ದಿನಾಂಕ: 7ನೇ ಜನವರಿ 2005**

**ವಿಷಯ:** ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ತಾಂತ್ರಿಕೇತರ ಸಹಾಯಕ ನಿರ್ದೇಶಕ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾಪಟ್ಟಿ ಪ್ರಕಟಣೆ.

**ಉಲ್ಲೇಖ:** ದಿನಾಂಕ: 17.11.2000 ರ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಓ 2000.

ದಿನಾಂಕ:17.11.2000ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಓ 2000 ದಲ್ಲಿ 31.10.2000 ರಲ್ಲಿದ್ದಂತೆ ಮುದ್ರಣ, ಲೇಖನಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಗೆಜೆಟೆಡ್ ಶ್ರೇಣಿಯ ವಿವಿಧ ವೃಂದದ ಅಧಿಕಾರಿಗಳ ಕರಡು ಜೇಷ್ಠತಾಪಟ್ಟಿಯನ್ನು ಆಕ್ಷೇಪಣೆ ಏನಾದರೂ ಇದ್ದಲ್ಲಿ, ಅದನ್ನು ಲಿಖಿತ ಮೂಲಕ ಸಲ್ಲಿಸುವಂತೆ ಪ್ರಕಟಿಸಲಾಗಿತ್ತು. ತಾಂತ್ರಿಕೇತರ ಸಹಾಯಕ ನಿರ್ದೇಶಕ ವೃಂದಕ್ಕೆ ಸಂಬಂಧಿಸಿದಂತೆ ಯಾವ ಆಕ್ಷೇಪಣೆಗಳೂ ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸರ್ಕಾರವು ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ತಾಂತ್ರಿಕೇತರ ಸಹಾಯಕ ನಿರ್ದೇಶಕರ ವೃಂದದ ದಿನಾಂಕ:31.10.2000 ರಲ್ಲಿ ಇದ್ದಂತಹ ಅಧಿಕಾರಿಗಳ ಜೇಷ್ಠತಾಪಟ್ಟಿಯನ್ನು ಈ ಕೆಳಗಿನಂತೆ ಪ್ರಕಟಿಸಿದೆ.

| ಕ್ರ. ಸಂ. | ಹೆಸರು<br>**ಶ್ರೀಮತಿ:ಶ್ರೀ** | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ |
|---|---|---|---|---|
| 1. | ಎಂ.ಜಿ. ಶಾರದ | 15.07.1947 | 02.12.1967 | 30.04.1985 |
| 2. | ಎನ್. ಲಕ್ಷ್ಮಿ | 03.11.1943 | 20.03.1968 | 30.04.1985 |
| 3. | ಜಿ.ಎಸ್. ಸಪ್ತಸಾಗರ | 14.09.1950 | 23.03.1973 | 01.01.1994 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 45

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1,2)

**ಅಧಿಕೃತ ಜ್ಞಾಪನಾ ಸಂಖ್ಯೆ: ಇಡಿ 83 ಡಿಜಿಓ 2000 (ii), ಬೆಂಗಳೂರು, ದಿನಾಂಕ: 7ನೇ ಜನವರಿ 2005**

**ವಿಷಯ:** ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ತಾಂತ್ರಿಕ ಸಹಾಯಕ ನಿರ್ದೇಶಕ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾಪಟ್ಟಿ ಪ್ರಕಟಣೆ.

**ಉಲ್ಲೇಖ:** ದಿನಾಂಕ: 17.11.2000 ರ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಓ 2000.

ದಿನಾಂಕ:17.11.2000ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಓ 2000 ದಲ್ಲಿ 31.10.2000 ರಲ್ಲಿದ್ದಂತೆ ಮುದ್ರಣ, ಲೇಖನಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಗೆಜೆಟೆಡ್ ಶ್ರೇಣಿಯ ವಿವಿಧ ವೃಂದದ ಅಧಿಕಾರಿಗಳ ಕರಡು ಜೇಷ್ಠತಾಪಟ್ಟಿಯನ್ನು ಆಕ್ಷೇಪಣೆ ಏನಾದರು ಇದ್ದಲ್ಲಿ, ಅದನ್ನು ಲಿಖಿತ ಮೂಲಕ ಸಲ್ಲಿಸುವಂತೆ ಪ್ರಕಟಿಸಲಾಗಿತ್ತು. ತಾಂತ್ರಿಕ ಸಹಾಯಕ ನಿರ್ದೇಶಕ ವೃಂದಕ್ಕೆ ಸಂಬಂಧಿಸಿದಂತೆ ಶ್ರೀಯುತರುಗಳಾದ ಶ್ರೀ ಎ. ರಾಮಮೂರ್ತಿ, ಶ್ರೀ ಎಂ.ಕೆ. ಚಂದ್ರ, ಅವರುಗಳು ತಾವು, 1987 ರಿಂದಲೂ ತಾಂತ್ರಿಕ ಸಹಾಯಕ ನಿರ್ದೇಶಕ ವೃಂದದಲ್ಲಿ ಸ್ವತಂತ್ರ ಪ್ರಭಾರದಲ್ಲಿ ಸೇವೆ ಸಲ್ಲಿಸಿದ್ದರೂ ಸಹ, ತಮಗೆ ಭವಿಷ್ಯವರ್ತಿಯಾಗಿ ತಾಂತ್ರಿಕ ಸಹಾಯಕ ನಿರ್ದೇಶಕ ವೃಂದದಲ್ಲಿ ನೀಡಿರುವ ಬಡ್ತಿಯು ಸರಿಯಲ್ಲವೆಂದು, ತಮ್ಮನ್ನು ಸಹಾಯಕ ನಿರ್ದೇಶಕ ವೃಂದದಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕದಿಂದ ಪೂರ್ವಾನ್ವಯವಾಗಿ ಬಡ್ತಿ ನೀಡಬೇಕೆಂದು ವಿನಂತಿಸಿರುವರು. ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ತಾಂತ್ರಿಕ ಸಹಾಯಕ ನಿರ್ದೇಶಕರ ಹುದ್ದೆಯ ಶೇಕಡ $66^2/_3$ ರಷ್ಟನ್ನು ಬಡ್ತಿಯಿಂದಲೂ, ಉಳಿದ $33^1/_3$ ರಷ್ಟನ್ನು ನೇರನೇಮಕಾತಿಯಿಂದಲೂ ತುಂಬಲು ಅವಕಾಶವಿದೆ. ಆಡಳಿತಾತ್ಮಕ ಕಾರಣಗಳಿಗಾಗಿ ನೇರನೇಮಕಾತಿ ಮೂಲಕ ತುಂಬಬೇಕಾದ ಹುದ್ದೆಗಳನ್ನು ತುಂಬಲಾಗಲಿಲ್ಲ. ಇಲಾಖೆಯ ಕೆಲಸ ಕಾರ್ಯಗಳು ಸುಗಮವಾಗಿ ನಡೆಯಬೇಕೆಂಬ ಹಿನ್ನೆಲೆಯಲ್ಲಿ ಇವರುಗಳನ್ನು ನೇರನೇಮಕಾತಿಗೆ ಮೀಸಲಾಗಿದ್ದ ಹುದ್ದೆಗಳಲ್ಲಿ ಇಲಾಖೆಯ ಮುಖ್ಯಸ್ಥರು ತಮ್ಮ ಹಂತದಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ್ದಾರೆ. ಆದುದರಿಂದ ಇವರಿಗೆ ಪೂರ್ವಾನ್ವಯ ಬಡ್ತಿ ಮತ್ತು ಪೂರ್ವಾನ್ವಯ ಜೇಷ್ಠತೆ ನೀಡಲು ಸಾಧ್ಯವಿರುವುದಿಲ್ಲ.

ಶ್ರೀ ಕೆ.ಎಂ. ಭುವನೇಶ್, ಅವರು 1976ರಲ್ಲಿ ತಾನು ಲೋಕಸೇವಾ ಆಯೋಗದ ಮೂಲಕ ಓವರ್‌ಸೀಯರ್ ಹುದ್ದೆಗೆ ನೇಮಕಾತಿ ಹೊಂದಿದ್ದು, ತಾನು ಜೇಷ್ಠನಿದ್ದರೂ ಸಹ ತನ್ನೊಂದಿಗೆ ನೇಮಕಗೊಂಡವರನ್ನು ತನಗಿಂತ ಜೇಷ್ಠರನ್ನಾಗಿ ಕಾಣಿಸಿರುವುದು ಸರಿಯಲ್ಲ, ಓವರ್‌ಸೀಯರ್ ಹಾಗೂ ಸೂಪರ್‌ವೈಜರ್ ಹುದ್ದೆಯಲ್ಲಿ ಜೇಷ್ಠತೆ ಸರಿಯಾಗಿ ನಿಗದಿಪಡಿಸಿ, ತನ್ಮೂಲಕ ಸಹಾಯಕ ನಿರ್ದೇಶಕರ ವೃಂದದಲ್ಲಿ ನಿಗದಿಪಡಿಸಬೇಕೆಂದು ಆಕ್ಷೇಪಣೆ ಸಲ್ಲಿಸಿರುವರು. ಇವರು ನಾನ್ ಗೆಜೆಟೆಡ್ ಹುದ್ದೆಯಲ್ಲಿ ಜೇಷ್ಠತೆ ನಿಗದಿ ಮಾಡಿರುವುದು ಸರಿಯಲ್ಲವೆಂದು ಆಕ್ಷೇಪಿಸಿರುವರು. ಇದು 1976ರ ಪ್ರಕರಣ ಇದೆ. ತಾಂತ್ರಿಕ ಸಹಾಯಕ ನಿರ್ದೇಶಕರ ಜೇಷ್ಠತಾಪಟ್ಟಿಗೆ ಆಕ್ಷೇಪಣೆ ಹಾಕುವ ಬದಲು, ಇವರು ಓವರ್‌ಸಿಯರ್ ಜೇಷ್ಠತಾಪಟ್ಟಿಯನ್ನು ಇಲ್ಲಿ ಪ್ರಶ್ನಿಸುತ್ತಿರುತ್ತಾರೆ. ಆದ್ದರಿಂದ ಅವರ ಆಕ್ಷೇಪಣೆ ಈ ಜೇಷ್ಠತಾಪಟ್ಟಿಗೆ ಅಪ್ರಸ್ತುತ. ಆದುದರಿಂದ ಇವರ ಆಕ್ಷೇಪಣೆಯನ್ನೂ ಸಹ ತಳ್ಳಿಹಾಕಿ, ದಿನಾಂಕ: 31.10.2000 ರಲ್ಲಿದ್ದಂತೆ ತಾಂತ್ರಿಕ ಸಹಾಯಕ ನಿರ್ದೇಶಕ ವೃಂದದ ಅಂತಿಮ ಜೇಷ್ಠತಾಪಟ್ಟಿಯನ್ನು ಈ ಕೆಳಗಿನಂತೆ ಪ್ರಕಟಿಸಿದೆ.

| ಕ್ರ. ಸಂ. | ಹೆಸರು<br>ಶ್ರೀಯುತರುಗಳು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ:ಸೇವೆಗೆ ಸೇರಿದ ದಿನಾಂಕ |
|---|---|---|---|---|
| 1. | ಭೈರಹನುಮಯ್ಯ | 30.06.1943 | 05.06.1963 | 17.08.1986 |
| 2. | ಎನ್. ಲಕ್ಷ್ಮೀನಾರಾಯಣ | 22.07.1964 | 04.01.1992 | 04.01.1992 |
| 3. | ಆರ್.ಕೆ. ಪ್ರಶಾಂತ್ | 17.04.1973 | 06.04.1998 | 06.04.1998 |
| 4. | ಎಂ.ಕೆ. ಚಂದ್ರ | 29.07.1945 | 01.06.1967 | 27.03.2000 |
| 5. | ಡಿ. ರಾಮಮೂರ್ತಿ | 20.06.1944 | 24.04.1967 | 27.03.2000 |
| 6. | ವಿ.ಎಂ. ಸಿದ್ದಪ್ಪ | 08.11.1943 | 13.09.1971 | 27.03.2000 |
| 7. | ಕೆ.ಎಂ. ಭುವನೇಶ್ | 30.05.1954 | 17.07.1975 | 27.03.2000 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 46

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1,2)

**ಅಧಿಕೃತ ಜ್ಞಾಪನಾ ಸಂಖ್ಯೆ: ಇಡಿ 83 ಡಿಜಿಒ 2000 (iii), ಬೆಂಗಳೂರು, ದಿನಾಂಕ: 7ನೇ ಜನವರಿ 2005**

**ವಿಷಯ:** ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಉಪ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾಪಟ್ಟಿ ಪ್ರಕಟಣೆ.

**ಉಲ್ಲೇಖ:** ದಿನಾಂಕ: 17.11.2000 ರ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಒ 2000.

ದಿನಾಂಕ:17.11.2000ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 83 ಡಿಜಿಒ 2000 ದಲ್ಲಿ 31.10.2000 ರಲ್ಲಿದ್ದಂತೆ ಮುದ್ರಣ, ಲೇಖನಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಗೆಜೆಟೆಡ್ ಶ್ರೇಣಿಯ ವಿವಿಧ ವೃಂದದ ಅಧಿಕಾರಿಗಳ ಕರಡು ಜೇಷ್ಠತಾಪಟ್ಟಿಯನ್ನು ಆಕ್ಷೇಪಣೆ ಏನಾದರು ಇದ್ದಲ್ಲಿ, ಅದನ್ನು ಲಿಖಿತ ಮೂಲಕ ಸಲ್ಲಿಸುವಂತೆ ಪ್ರಕಟಿಸಲಾಗಿತ್ತು. ಉಪನಿರ್ದೇಶಕ ವೃಂದಕ್ಕೆ ಸಂಬಂಧಿಸಿದಂತೆ ಶ್ರೀ ಎನ್. ಲಕ್ಷ್ಮೀನಾರಾಯಣ ಅವರು ಹಿಂದೆ ಸರ್ಕಾರ 27.5.1997ರ ಅಧಿಸೂಚನೆ ಸಂಖ್ಯೆ: ಇಡಿ 11 ಡಿಜಿಒ 96ರಲ್ಲಿ ಪ್ರಕಟಪಡಿಸಿದ ಅಂತಿಮ ಜೇಷ್ಠತಾಪಟ್ಟಿಯಲ್ಲಿ ಸಹಾಯಕ ನಿರ್ದೇಶಕ ವೃಂದದಲ್ಲಿ ತನ್ನ ಹೆಸರು ಕ್ರಮಸಂಖ್ಯೆ 39 ರಲ್ಲಿದ್ದು, ತಾನು ನೇರನೇಮಕಾತಿಯ ಮೂಲಕ ದಿನಾಂಕ: 1.4.1992 ರಂದು ಆಯ್ಕೆಹೊಂದಿದ್ದು, ತಾನು ಪರಿಶಿಷ್ಟ ವರ್ಗದವರಿದ್ದರೂ ಸಹ ತನ್ನನ್ನು ಕಡೆಗಣಿಸಿ ಕ್ರಮಸಂಖ್ಯೆ 40 ರಲ್ಲಿನ, ಬಡ್ತಿಯ ಮೂಲಕ ದಿನಾಂಕ:1.4.1992 ರಂದು ಸಹಾಯಕ ನಿರ್ದೇಶಕರಾಗಿದ್ದ ಶ್ರೀ ಎಸ್. ಪುಟ್ಟಸಿದ್ದಯ್ಯ ಅವರಿಗೆ ಉಪನಿರ್ದೇಶಕ ಶ್ರೇಣಿಗೆ ನೀಡಿರುವ ಬಡ್ತಿಯು ದಿನಾಂಕ:24.7.1997ರ ಡಿಪಿಎಆರ್ 10 ಎಸ್‌ಬಿಸಿ 97ರ ಸೂಚನೆಗಳಿಗೆ ವಿರುದ್ಧವಾಗಿದೆ ಎಂದೂ ಅವರಿಗೆ ಉಪನಿರ್ದೇಶಕ ವೃಂದದಲ್ಲಿ 12ನೇ ಬಿಂದುವಿನಲ್ಲಿ 28.7.1997 ರಂದು ನೀಡಿರುವ ಬಡ್ತಿಯು ನ್ಯಾಯ ಸಮ್ಮತವಾಗಿಲ್ಲವೆಂದೂ, ಅದನ್ನು ಸರಿಪಡಿಸಿ, ತನಗೆ ಸಲ್ಲಬೇಕಾದ ಬಡ್ತಿಯನ್ನು ಪೂರ್ವಾನ್ವಯವಾಗಿ ನೀಡಬೇಕೆಂದು, ಹಾಗೂ ಸಹಾಯಕ ನಿರ್ದೇಶಕ ವೃಂದದಲ್ಲಿ ಬ್ಲಾಕ್ ವರ್ಗೀಕರಣ ಮಾಡಿರುವುದು ಸರಿಯಲ್ಲವೆಂದು ಆಕ್ಷೇಪಿಸಿರುವರು. ಶ್ರೀ ಎನ್. ಲಕ್ಷ್ಮೀನಾರಾಯಣ ಅವರು 4.1.1992 ರಂದು ನೇರನೇಮಕಾತಿ ಮೂಲಕ ಆಯ್ಕೆಗೊಂಡ ಪರಿಶಿಷ್ಟ ವರ್ಗದ ಅಭ್ಯರ್ಥಿ ಇದ್ದು, ಇವರ ಹೆಸರು ದಿನಾಂಕ 27.5.1997 ರಂದು ಪ್ರಕಟಪಡಿಸಿದ ಸಹಾಯಕ ನಿರ್ದೇಶಕ ವೃಂದದ ಅಂತಿಮ ಜೇಷ್ಠತಾಪಟ್ಟಿಯಲ್ಲಿ ಕ್ರಮಸಂಖ್ಯೆ 39ರಲ್ಲಿದೆ. ಶ್ರೀ ಎಸ್. ಪುಟ್ಟಸಿದ್ದಯ್ಯ ಅವರು 1976 ರಲ್ಲಿ ಓವರ್‌ಸೀಯರ್ ಆಗಿ ನೇರನೇಮಕಾತಿ ಹೊಂದಿದ ಪರಿಶಿಷ್ಟ ಜಾತಿಯ ಮೊದಲ ಏಕೈಕ ಅಭ್ಯರ್ಥಿ ಇದ್ದಾರೆ. ಇವರಿಗೆ 1.4.1992 ರಂದು ಸಹಾಯಕ ನಿರ್ದೇಶಕ ವೃಂದದಲ್ಲಿ ಬಡ್ತಿ ದಿನಾಂಕ ನಿಗದಿಪಡಿಸಿದ್ದು, ಇವರ ಹೆಸರು ಕ್ರಮಸಂಖ್ಯೆ 40 ರಲ್ಲಿದೆ. ಇಲಾಖೆಯಲ್ಲಿ ಪರಿಶಿಷ್ಟ ಜಾತಿಯ : ವರ್ಗದ ಅಭ್ಯರ್ಥಿಗಳಿಗೆ ಬಡ್ತಿ ಮೂಲಕ ತುಂಬಲು ಅರ್ಹರಾದ ಯಾವ ಅಭ್ಯರ್ಥಿಗಳೂ ಇರಲಿಲ್ಲ. ಶ್ರೀ ಪುಟ್ಟಸಿದ್ದಯ್ಯ ಅವರು ದೊರೆತ ಮೊದಲ ಏಕೈಕ ಪರಿಶಿಷ್ಟ ಜಾತಿಯ ಅಭ್ಯರ್ಥಿಯಾಗಿದ್ದರು. ಪರಿಶಿಷ್ಟ ಜಾತಿಯ ಅಭ್ಯರ್ಥಿ ಯಾರೂ ಇಲ್ಲದ ಕಾರಣ ಹಾಗೂ ಪರಿಶಿಷ್ಟ ಜಾತಿಯಲ್ಲಿ ದೊರೆತ ಮೊದಲ ಏಕೈಕ ಅಭ್ಯರ್ಥಿ ಶ್ರೀ ಪುಟ್ಟಸಿದ್ದಯ್ಯ ಅವರಾದುದರಿಂದ ಅವರಿಗೆ 12ನೇ ಬಿಂದುವಿನಲ್ಲಿ ಉಪನಿರ್ದೇಶಕ ಶ್ರೇಣಿಯಲ್ಲಿ 28.7.1997 ರಂದು ಬಡ್ತಿ ನೀಡಲಾಗಿದೆ. ಆದ್ದರಿಂದ ಶ್ರೀ ಎನ್. ಲಕ್ಷ್ಮೀನಾರಾಯಣ ಅವರ ಆಕ್ಷೇಪಣೆಯನ್ನು ತಳ್ಳಿಹಾಕಿ ಉಪನಿರ್ದೇಶಕ ವೃಂದದ ಅಂತಿಮ ಜೇಷ್ಠತಾಪಟ್ಟಿಯನ್ನು ಈ ಕೆಳಗಿನಂತೆ ಪ್ರಕಟಿಸಿದೆ.

| ಕ್ರ. ಸಂ. | ಹೆಸರು<br>ಶ್ರೀಯುತರುಗಳಾದ: | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ |
|---|---|---|---|---|
| 1. | ಎಂ. ಚಲಪತಿ | 09.03.1943 | 06.06.1964 | 01.05.1994 |
| 2. | ಎಸ್. ಪುಟ್ಟಸಿದ್ದಯ್ಯ | 09.03.1950 | 27.06.1976 | 28.07.1997 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 47

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1,2)